# संस्कृतगद्यपद्यमञ्जरी

ಮೊದಲನೆ ಬಿ.ಎ./ಬಿ.ಎಸ್‌ಸಿ. ತರಗತಿ ಪಠ್ಯಪುಸ್ತಕ



ಸಂಪಾದಕ

ಕೆ. ಟಿ. ಪಾಂಡುರಂಗಿ

ಬೆಂಗಳೂರು ವಿಶ್ವವಿದ್ಯಾಲಯ

1969

# संस्कृतगद्यपद्यमञ्जरी

ಮೊದಲನೆಯ ಬಿ.ಎ./ಬಿ.ಎಸ್‌ಸಿ. ತರಗತಿ ಪಠ್ಯಪುಸ್ತಕ

ಸಂಪಾದಕ

ಕೆ. ಟಿ. ಪಾಂಡುರಂಗಿ

ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ

**ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು 1**

ಪಠ್ಯಪುಸ್ತಕ 28
ಪ್ರಧಾನ ಸಂಪಾದಕರು : ಡಾ॥ ರಂ. ಶ್ರೀ. ಮುಗಳಿ

ಸಂಸ್ಕೃತ ಸಂಪಾದಕ ಸಮಿತಿ

ಶ್ರೀ. ಕೆ. ಟಿ. ಪಾಂಡುರಂಗಿ (ಅಧ್ಯಕ್ಷರು)
ಶ್ರೀ. ಎಂ. ಪಿ. ಎಲ್. ಶಾಸ್ತ್ರಿ
ಶ್ರೀ. ಎಂ. ಎ. ಕೃಷ್ಣಸ್ವಾಮಿ



ಬೆಲೆ : ರೂ. 3.00

ಮುದ್ರಣ : ಪ್ರಭಾ ಪ್ರಿಂಟಿಂಗ್ ಹೌಸ್, ಬೆಂಗಳೂರು-4

## ಮುನ್ನುಡಿ

ಕನ್ನಡ ಮಾಧ್ಯಮದಲ್ಲಿ ಕಾಲೇಜು ಮಟ್ಟದ ವಿದ್ಯಾ ವ್ಯಾಸಂಗ ಮಾಡಬೇಕು ಎಂದು ಬಯಸುವ ವಿದ್ಯಾರ್ಥಿಗಳಿಗೆ ತಕ್ಕ ಸೌಕರ್ಯಗಳನ್ನು ಒದಗಿಸಿಕೊಡಬೇಕು; ಜೊತೆಯಲ್ಲಿಯೇ, ಉನ್ನತ ಮಟ್ಟದ ಜ್ಞಾನದಾನವು ಮಾತೃಭಾಷೆಯಲ್ಲಿಯೇ ನಡೆಯಲು ಸಮರ್ಪಕ ವಾತಾವರಣವನ್ನು ರಚಿಸಬೇಕು—ಇವೆರಡು ಉದ್ದೇಶಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಬೆಂಗಳೂರು ವಿಶ್ವವಿದ್ಯಾಲಯವು ಜನವರಿ 1967 ರಲ್ಲಿ ಒಂದು ನಿರ್ಧಾರವನ್ನು ಕೈಗೊಂಡಿತು. ಅದು ಅಖಿಲ ಭಾರತೀಯ ವಿದ್ಯಾಧೋರಣೆಗೆ ಅನುಸಾರವಾಗಿಯೂ ಇತ್ತು.

ಇದರ ಅಂಗವಾಗಿ, 1967-68 ರ ಪ್ರೀಯುನಿವರ್ಸಿಟಿ ತರಗತಿಯಲ್ಲಿ ಐಚ್ಛಿಕವಾಗಿ ಕನ್ನಡ ಮಾಧ್ಯಮವನ್ನು ಸ್ವೀಕರಿಸುವ ವಿದ್ಯಾರ್ಥಿಗಳಿಗೆ, ಕನ್ನಡ ಮಾಧ್ಯಮದ ಒಂದು ವಿಭಾಗವನ್ನು ಪ್ರಾರಂಭಿಸಬಹುದೆಂದು ಕಾಲೇಜುಗಳಿಗೆ ಆದೇಶ ನೀಡಲಾಯಿತು. ಜೊತೆಯಲ್ಲಿಯೇ ಯೋಗ್ಯ ಪಠ್ಯಪುಸ್ತಕಗಳನ್ನು ಕನ್ನಡ ಭಾಷೆಯಲ್ಲಿ ಒದಗಿಸಿಕೊಡುವ ಹೊಣೆಗಾರಿಕೆಯನ್ನು ವಿಶ್ವವಿದ್ಯಾಲಯವು ವಹಿಸಿಕೊಂಡಿತು. ಇದರ ನಿರ್ವಹಣೆಗಾಗಿ ವಿಶ್ವವಿದ್ಯಾಲಯದ ಕನ್ನಡ ಪಠ್ಯಪುಸ್ತಕ ಸಮಿತಿಯು ರೂಪುಗೊಂಡಿತು. ಡಾ|| ರಂ. ಶ್ರೀ. ಮುಗಳಿಯವರ ಅಧ್ಯಕ್ಷತೆಯಲ್ಲಿ ನೇಮಕವಾದ ಈ ಸಮಿತಿಯು ಹೊಸದಾರಿಯಲ್ಲಿ ಉತ್ಸಾಹದಿಂದ ನಡೆದು ಇದೀಗ ಹಲವಾರು ಪಠ್ಯಪುಸ್ತಕಗಳನ್ನು ಬೇರೆ ಬೇರೆ ವಿಷಯಗಳಲ್ಲಿ ಪ್ರಕಟಗೊಳಿಸುತ್ತಿದೆ.

ಇಂಥ ಒಂದು ಪವಿತ್ರ ಕಾರ್ಯದಲ್ಲಿ ಸಹಾಯಕವಾಗಿರುವ ಶಕ್ತಿಗಳು ಹಲವಾರು. ವಿವಿಧ ವಿಷಯಗಳ ಸಂಪಾದಕ ಮಂಡಳಿಗಳು, ಲೇಖಕರು, ಭಾಷಾತಜ್ಞರು, ಮುದ್ರಣಕಾರರು, ಮೊದಲಾದವರು; ಮತ್ತು ಇವರನ್ನೆಲ್ಲ ಒಂದುಗೂಡಿಸಿ ಕ್ಷಿಪ್ರವೇಳೆಯಲ್ಲಿ ಗುರಿಸಾಧಿಸಿರುವ ಪಠ್ಯಪುಸ್ತಕ ಸಮಿತಿ; ಇವರೆಲ್ಲರಿಗೂ ವಿಶ್ವವಿದ್ಯಾಲಯವು ಋಣಿಯಾಗಿದೆ; ಅವರ ವಿಶ್ವಾಸಪೂರ್ಣ ಸೇವೆಯನ್ನು ಮೆಚ್ಚಿಕೊಂಡಿದೆ.

ಕನ್ನಡ ಭಾಷೆ ಬೆಳೆಯದೇ ವಿಶ್ವದ ಆಧುನಿಕ, ವಿಶೇಷವಾಗಿ ವೈಜ್ಞಾನಿಕ, ಜ್ಞಾನವನ್ನು ಅದರಲ್ಲಿ ವಿವರಿಸುವುದು ಸಾಧ್ಯವಿಲ್ಲ; ಸಾಕಷ್ಟು ಗ್ರಂಥಗಳು ಬರದೇ ಭಾಷೆ ಬೆಳೆಯುವಂತಿಲ್ಲ. ಈ ವಿಷವರ್ತುಲಭೇದನದ ದಾರಿ ಒಂದೇ—ವಿಶ್ವವಿದ್ಯಾಲಯವು ತಜ್ಞರ ನೆರವಿನಿಂದ ಗ್ರಂಥರಚನೆ ಪ್ರಾರಂಭಿಸಬೇಕು. ಮೊದಲ ದಿನಗಳಲ್ಲಿ ಎದುರಾಗುವ

ತೊಡರುಗಳು ಹಲವಾರು—ಕನ್ನಡದಲ್ಲಿ ಬರೆಯಬಲ್ಲ ತಜ್ಞರು ಯಾರು ? ಪಾರಿಭಾಷಿಕ ಪದಗಳ ವಿಚಾರವೇನು ? ಯಾರಿಗಾಗಿ ಬರೆಯುವುದು ? ಈ ಪುಸ್ತಕಗಳ ಮಾರಾಟ ವಾದೀತೇ ? ಕನ್ನಡ ಪಠ್ಯಪುಸ್ತಕ ಸಮಿತಿಯ ಪ್ರತ್ಯಕ್ಷಕಾರ್ಯವು ಇವೆಲ್ಲ ಪ್ರಶ್ನೆಗಳಿಗೂ ಸ್ವಲ್ಪಮಟ್ಟಿಗಾದರೂ ಉತ್ತರ ನೀಡಿದೆ.

ಮುಂಬರುವ ದಿವಸಗಳಲ್ಲಿ ಪಠ್ಯಪುಸ್ತಕಗಳೂ, ಇತರ ಪುಸ್ತಕಗಳೂ ವಿಪುಳ ಸಂಖ್ಯೆಯಲ್ಲಿ ಪ್ರಕಟಿತವಾಗಿ ಕನ್ನಡದ ಸಜೀವ ಮಾಧ್ಯಮದ ಮೂಲಕ ಪ್ರಪಂಚದ ಅತ್ಯುತ್ತಮ ಜ್ಞಾನವು (ಅತ್ಯಾಧುನಿಕ ಜ್ಞಾನ ಸಹ) ಕನ್ನಡ ಮಕ್ಕಳಿಗೆ ದೊರೆಯು ವುದೆಂದು ಹಾರೈಸುತ್ತೇನೆ.

ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು
ಆಗಸ್ಟ 15, 1969

ವಿ. ಕೃ. ಗೋಕಾಕ್
ಉಪಕುಲಪತಿ

## ನಾಲ್ಕು ಮಾತು

ಬೆಂಗಳೂರು ವಿಶ್ವವಿದ್ಯಾಲಯವು ವಿದ್ಯಾಭ್ಯಾಸದ ಮಾಧ್ಯಮದ ವಿಚಾರದಲ್ಲಿ ಕೂಲಂಕಷವಾಗಿ ಆಲೋಚಿಸಿ ಪ್ರಾದೇಶಿಕ ಭಾಷೆಯೇ ಉಚ್ಚ ವ್ಯಾಸಂಗದಲ್ಲಿಯೂ ಮಾಧ್ಯಮವಾಗಬೇಕೆಂಬ ತೀರ್ಮಾನಕ್ಕೆ ಬಂದಿತು. ಆದರೆ ಸದ್ಯದ ಪರಿಸ್ಥಿತಿಯಲ್ಲಿ ಅದನ್ನು ಐಚ್ಛಿಕವಾಗಿಡುವುದು ಯುಕ್ತ ಎಂಬ ನಿರ್ಣಯವನ್ನು ಅದು ಕೈಗೊಂಡು ಕನ್ನಡ ಪಠ್ಯಪುಸ್ತಕ ರಚನೆ ಮತ್ತು ಪ್ರಕಟಣೆಗಳಿಗೆ ಕನ್ನಡ ಪಠ್ಯಪುಸ್ತಕ ಸಮಿತಿ ಒಂದನ್ನು ನೇಮಕ ಮಾಡಿರುತ್ತದೆ. ಈ ಸಮಿತಿಯ ಪರವಾಗಿ ಬೇರೆ ಬೇರೆ ವಿಷಯಗಳನ್ನು ಕುರಿತು ಕನ್ನಡದಲ್ಲಿ ಪುಸ್ತಕಗಳನ್ನು ಬರೆಯುವದಕ್ಕೆಂದು ಅನುಭವಿಕರಾದ ಅಧ್ಯಾಪಕರನ್ನು ಕೇಳಿಕೊಳ್ಳಲಾಯಿತು. ಆಯಾ ವಿಷಯಕ್ಕೆ ಸಂಬಂಧಪಟ್ಟ ಪಠ್ಯ ಸಮಿತಿಯ ಸದಸ್ಯರಾಗಲಿ, ಪಠ್ಯಸಮಿತಿ ಗೊತ್ತುಪಡಿಸಿದ ಸಂಪಾದಕ ಸಮಿತಿಯ ಅಧ್ಯಕ್ಷರಾಗಲಿ, ಸದಸ್ಯರಾಗಲಿ, ಲೇಖಕರಿಂದ ಬರುವ ಹಸ್ತಪ್ರತಿಗಳನ್ನು ಪರಿಶೀಲಿಸಬೇಕೆಂದು ಬಿನ್ನವಿಸಲಾಯಿತು. ಪ್ರತಿಯೊಂದು ಹಸ್ತಪ್ರತಿಯನ್ನೂ ಭಾಷಾ ತಜ್ಞರಿಂದ ನೋಡಿಸಬೇಕೆಂದೂ ಗೊತ್ತಾಯಿತು. ಈ ಎಲ್ಲ ಬಗೆಯ ಪ್ರಕ್ರಿಯೆಗೆ ಒಳಪಟ್ಟು ಸಾಧ್ಯವಾದಷ್ಟು ಪರಿಪೂರ್ಣವೂ ನಿರ್ದುಷ್ಟವೂ ಆದ ಪಠ್ಯಪುಸ್ತಕವು ರಚಿತವಾಗಬೇಕೆಂದೂ ಅದು ಸೊಗಸಾಗಿ ಮುದ್ರಿತವಾಗಬೇಕೆಂದೂ ಕನ್ನಡ ಪಠ್ಯಸಮಿತಿ ಪ್ರಾಮಾಣಿಕ ಪ್ರಯತ್ನಗಳನ್ನು ಮಾಡುತ್ತಿದೆ. ಪಠ್ಯವೆಂಬ ದೃಷ್ಟಿಯಿಂದ ಮಾತ್ರವಲ್ಲ—ಕನ್ನಡ ಜನಕ್ಕೆ ಕನ್ನಡದಲ್ಲಿಯೇ ಉತ್ತಮ ಜ್ಞಾನವು ಉಪಲಬ್ಧವಾಗಲಿ ಎಂಬ ವ್ಯಾಪಕವಾದ ಉದ್ದೇಶವೂ ಈ ಮಹಾಕಾರ್ಯದ ಹಿನ್ನೆಲೆಯಲ್ಲಿದೆ.

ಈ ಕಾರ್ಯವು ಎಷ್ಟು ಯಶಸ್ವಿಯಾಗುವುದೋ ಅಷ್ಟು ವೇಗದಿಂದ ಐಚ್ಛಿಕವಾದ ಮಾಧ್ಯಮವು ಸಾರ್ವತ್ರಿಕವಾಗುತ್ತದೆ. ಕಡ್ಡಾಯವಾದ ಮಾಧ್ಯಮ ಎನಿಸಿಕೊಳ್ಳದೆ ಕಡ್ಡಾಯವಾಗಿ ಅದನ್ನೇ ಸ್ವೀಕರಿಸಬೇಕು ಎಂಬ ಇಚ್ಛೆಯನ್ನು ನಿರ್ಮಾಣಮಾಡುತ್ತದೆ. ಮಾಧ್ಯಮದ ವಿಚಾರವಾಗಿ ನಮ್ಮ ದೇಶದಲ್ಲಿ ಅನೇಕ ಬಗೆಯ ಸಾಧಕ ಬಾಧಕ ಚರ್ಚೆ ನಡೆದಿದೆ. ಮುಖ್ಯವಾಗಿ ಜ್ಞಾನದ ಆಕಲನ ಮತ್ತು ಅಭಿವ್ಯಕ್ತಿ ಇವೆರಡು ಕ್ರಿಯೆಗಳಿಗೆ ಸಾಮಾನ್ಯ ವಿದ್ಯಾರ್ಥಿ ಮತ್ತು ಸಾಮಾನ್ಯ ನಾಗರಿಕ ಇವರ ದಾರಿಯಲ್ಲಿ ಪರಕೀಯ ಭಾಷೆಯ ಅಡ್ಡಿ ಆತಂಕಗಳನ್ನು ಒಡ್ಡದೆ ಅವರವರ ಸ್ವಂತ ಭಾಷೆಯಲ್ಲಿ

ಜ್ಞಾನಸಾಮಗ್ರಿಯನ್ನು ಒದಗಿಸಿದರೆ ಮಾತ್ರ ಪ್ರಜಾಪ್ರಭುತ್ವ ಸಾರ್ಥಕವಾಗುತ್ತದೆ. ನಿರ್ಮಾಣಶೀಲವಾದ ವಿಚಾರವಂತಿಕೆ ಮತ್ತು ಮುಕ್ತ ರೀತಿಯ ಅಭಿವ್ಯಕ್ತಿ ಇವುಗಳಿಗೆ ಅವಕಾಶ ದೊರೆಯುತ್ತದೆ. ಈ ದೃಷ್ಟಿಯನ್ನು ಇಟ್ಟುಕೊಂಡು ಕನ್ನಡ ಪಠ್ಯಸಮಿತಿ ನಿಷ್ಠೆಯಿಂದ ಕಾರ್ಯಪ್ರವೃತ್ತವಾಗಿದೆ.

ಈ ಪಠ್ಯಪುಸ್ತಕ ಯೋಜನೆಗೆ ರೂಪಕೊಟ್ಟು ಅದನ್ನು ಕಾರ್ಯಗತ ಮಾಡುವ ದಿಶೆಯಲ್ಲಿ ಸೂಕ್ತ ಕ್ರಮಗಳನ್ನು ಕೈಕೊಂಡು ಕನ್ನಡ ಪಠ್ಯಪುಸ್ತಕ ಸಮಿತಿಗೆ ಎಲ್ಲ ಬಗೆಯ ಮಾರ್ಗದರ್ಶನ ಮಾಡುತ್ತಿರುವ ಮತ್ತು ಈ ಪುಸ್ತಕಕ್ಕೆ ಮುನ್ನುಡಿ ಬರೆದಿರುವ ಬೆಂಗಳೂರು ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿರುವ ಡಾ. ವಿ. ಕೆ. ಗೋಕಾಕ್ ಅವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು. ನಮ್ಮ ಕಾರ್ಯದಲ್ಲಿ ಸರ್ವ ವಿಧವಾದ ನೆರವನ್ನು ನೀಡುತ್ತಿರುವ ವಿಶ್ವವಿದ್ಯಾಲಯದ ರಿಜಿಸ್ಟ್ರಾರ್ ಶ್ರೀ ಮಲ್ಲಿಕಾರ್ಜುನಪ್ಪನವರಿಗೂ ನಮ್ಮ ಹಾರ್ದಿಕ ಧನ್ಯವಾದಗಳು.

ಈ ಸಂಸ್ಕೃತ ಗದ್ಯಪದ್ಯ ಮಂಜರಿಯನ್ನು ಕನ್ನಡ ಪೀಠಿಕೆ, ಟಿಪ್ಪಣಿಗಳೊಡನೆ ಸಂಪಾದಿಸಿಕೊಟ್ಟ ಪ್ರೊ. ಕೆ. ಟಿ. ಪಾಂಡುರಂಗಿ ಅವರಿಗೂ, ಇದನ್ನು ಪರಿಶೀಲಿಸಿ ಮುದ್ರಣಕ್ಕೆ ಶಿಫಾರಸು ಮಾಡಿದ ಸಂಸ್ಕೃತ ಸಂಪಾದಕ ಸಮಿತಿಯ ಸದಸ್ಯ ಶ್ರೀ ಎಂ. ಪಿ. ಎಲ್. ಶಾಸ್ತ್ರಿಗಳಿಗೂ ವಂದನೆಗಳು. ಇದನ್ನು ಅಂದವಾಗಿ ಮುದ್ರಿಸಿದ ಪ್ರಭಾ ಪ್ರಿಂಟಿಂಗ್ ಹೌಸ್ ಅವರಿಗೆ ನಾವು ಕೃತಜ್ಞರು.

ಪಠ್ಯಪುಸ್ತಕ ಸಮಿತಿಯ ಕಾರ್ಯದಲ್ಲಿ ನಿತಾಂತ ಉತ್ಸಾಹದಿಂದ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಕೆ. ಸಿ. ಶಿವಪ್ಪನವರಿಗೆ ನನ್ನ ಹಾರ್ದಿಕ ಧನ್ಯವಾದಗಳು.

**ರಂ. ಶ್ರೀ. ಮುಗಳಿ**
ಪ್ರಧಾನ ಸಂಪಾದಕ
ಕನ್ನಡ ಪಠ್ಯಪುಸ್ತಕ ಸಮಿತಿ

## ಅರಿಕೆ

ಬೆಂಗಳೂರು ವಿಶ್ವವಿದ್ಯಾಲಯದ ಸಂಸ್ಕೃತ, ಪ್ರಾಕೃತ ಮತ್ತು ಪಾಲಿ ಅಧ್ಯಯನ ಮಂಡಲಿಯವರು ಬಿ.ಎ., ಬಿ.ಎಸ್‌ಸಿ. ಮೊದಲನೆಯ ವರ್ಷದ ಸಂಸ್ಕೃತ ಭಾಷೆಯ ಅಧ್ಯಯನಕ್ಕೆ ಸಂಸ್ಕೃತ ಗದ್ಯಪದ್ಯ ಮಂಜರಿಯೊಂದನ್ನು ಸಿದ್ಧಪಡಿಸ ಬೇಕೆಂದು ನಿರ್ಣಯಿಸಿದರು. ಈ ನಿರ್ಣಯವನ್ನನುಸರಿಸಿ ಇದನ್ನು ಸಿದ್ಧಪಡಿಸುವ ಕಾರ್ಯವನ್ನು ನನಗೆ ವಹಿಸಿಕೊಡಲಾಯಿತು. ಬೆಂಗಳೂರು ವಿಶ್ವವಿದ್ಯಾಲಯದ ಪ್ರಕಾಶನ ವಿಭಾಗದ ಅಂಗವಾಗಿ ಸಂಸ್ಕೃತ ಪಠ್ಯಪುಸ್ತಕಗಳ ಯೋಜನೆಗೆ ಒಂದು ಸಂಪಾದಕ ಸಮಿತಿಯನ್ನೂ ರಚಿಸಲಾಯಿತು. ಈ ಸಮಿತಿಯ ಸಲಹೆ ಸೂಚನೆಗಳಂತೆ ಈ ಗದ್ಯಪದ್ಯ ಮಂಜರಿಯನ್ನು ಇದೀಗ ಪ್ರಕಟಿಸಲು ತುಂಬಸಂತೋಷವಾಗುತ್ತದೆ.

ಈ ಮೊದಲು ಈ ತರಗತಿಗೆ ಒಂದು ಸರ್ಗ ಮಹಾಕಾವ್ಯವನ್ನೂ ಒಂದು ಕಾಂಡ ಚಂಪೂಕಾವ್ಯ ಅಥವಾ ಅದಕ್ಕೆ ಸಮನಾದ ಗದ್ಯಕಾವ್ಯವನ್ನೂ ಗೊತ್ತುಪಡಿಸ ಲಾಗುತ್ತಿತ್ತು. ಹೀಗೆ ಒಬ್ಬಿಬ್ಬರ ಕೃತಿಗಳನ್ನು ಮಾತ್ರ ಓದುವದಕ್ಕಿಂತ ಪ್ರಮುಖ ರಾದ ಕೆಲವು ಕವಿಗಳ ಕೃತಿಗಳನ್ನು ಓದುವ ಅವಕಾಶವನ್ನು ಒದಗಿಸಿಕೊಡಬೇಕೆಂಬ ಉದ್ದೇಶದಿಂದ ಈ ಗದ್ಯಪದ್ಯ ಮಂಜರಿಯ ಆಲೋಚನೆಯನ್ನು ಕೈಕೊಳ್ಳಲಾಯಿತು. ಇಂಥ ಸಂಕಲನಗಳನ್ನು ಪ್ರತಿವರ್ಷ ಪ್ರಕಟಿಸುವದು ಅನನುಕೂಲವಾದ್ದರಿಂದ ಎರಡು ಸಂಕಲನಗಳಷ್ಟು ಭಾಗಗಳನ್ನು ಒಂದು ಸಂಪುಟದಲ್ಲಿಯೇ ಪ್ರಕಟಿಸಿ ೭-೮ ಪಾಠ ಗಳನ್ನು ಒಮ್ಮೆಯೂ ಇನ್ನುಳಿದ ೭-೮ ಪಾಠಗಳನ್ನು ಮತ್ತೊಮ್ಮೆಯೂ ಗೊತ್ತುಪಡಿಸ ಬೇಕೆಂಬ ಉದ್ದೇಶದಿಂದ ೧೫ ಪಾಠಗಳ ಸಂಕಲನವನ್ನು ಸಿದ್ಧಪಡಿಸಲಾಗಿದೆ. ಆಯಾ ವರ್ಷ ಗೊತ್ತುಪಡಿಸುವ ಪಾಠಗಳನ್ನು ಅಧ್ಯಯನ ಮಂಡಲಿಯು ಪ್ರಕಟಿಸುವದು.

ಈ ಸಂಕಲನದಲ್ಲಿ ಕಾಲಿದಾಸ, ಭಾರವಿ, ಮಾಘ, ಕುಮಾರದಾಸ ಮತ್ತು ಗಂಗಾದೇವಿ ಈ ಐದು ಕವಿಗಳ ಮಹಾಕಾವ್ಯಗಳಿಂದ ಆಯ್ದ ಭಾಗಗಳನ್ನು ಎರಡರಿಂದ ಆರರವರೆಗಿನ ಪಾಠಗಳಲ್ಲಿ ಕೊಡಲಾಗಿದೆ. ಈ ಯೋಜನೆಯಲ್ಲಿ ಅತಿಪ್ರಸಿದ್ಧರಲ್ಲದೆ ಅಷ್ಟೊಂದು ಪ್ರಸಿದ್ಧರಲ್ಲದವರನ್ನು ಸೇರಿಸಿರುವದನ್ನೂ ಕವಯಿತ್ರಿಯೋರ್ವಳನ್ನು ಸೇರಿಸಿರುವದನ್ನೂ ಗಮನಿಸಬಹುದು. ಸುಬಂಧು ಮತ್ತು ಬಾಣಭಟ್ಟರ ಗದ್ಯ ಕಾವ್ಯಗಳಿಂದ ಸುಲಭವಾದ ಆದರೆ ಸುಂದರವಾದ ಸಂಸ್ಕೃತ ಗದ್ಯಶೈಲಿಯ ಪರಿಚಯ ವನ್ನು ಮಾಡಿಕೊಡುವ ಎರಡು ಚಿಕ್ಕಭಾಗಗಳನ್ನು ಮುಂದಿನ ಎರಡು ಪಾಠಗಳಲ್ಲಿ

ಕೊಡಲಾಗಿದೆ. ಸಂಸ್ಕೃತದಲ್ಲಿ ಕಾವ್ಯಗುಣಗಳಿರುವ ಕೆಲವು ಉತ್ತಮವಾದ ಶಾಸನಗಳಿವೆ. ಅವುಗಳ ಮಾದರಿಯೆಂದು 'ಐಹೊಳೆ ಶಾಸನ'ವನ್ನು ಸೇರಿಸಲಾಗಿದೆ. ಚಂಪೂಕಾವ್ಯಗಳ ಮಾದರಿಯೆಂದು ಎರಡು ಚಂಪೂಕಾವ್ಯಗಳ ಚಿಕ್ಕಭಾಗಗಳನ್ನೂ ಭಾವಕಾವ್ಯ ಮತ್ತು ನೀತಿಕಾವ್ಯಗಳ ಮಾದರಿಗಾಗಿ 'ಮೇಘಸಂದೇಶ' ಮತ್ತು 'ನೀತಿಶತಕ'ದ ಭಾಗಗಳನ್ನೂ ಆಯ್ದುಕೊಡಲಾಗಿದೆ. ಅನ್ಯೋಕ್ತಿಗಳು ಸಂಸ್ಕೃತ ಸಾಹಿತ್ಯದ ವೈಶಿಷ್ಟ್ಯ. ಅದರ ಸ್ವಾರಸ್ಯ ಮತ್ತು ಪ್ರೌಢಿಮೆಗಳ ಪರಿಚಯವನ್ನು ಮಾಡಿಕೊಡುವದಕ್ಕಾಗಿ ಪಂಡಿತರಾಜ ಜಗನ್ನಾಥನ 'ಭಾಮಿನೀವಿಲಾಸ'ದಿಂದ ಕೆಲವು ಅನ್ಯೋಕ್ತಿಗಳನ್ನು ಆರಿಸಿಕೊಡಲಾಗಿದೆ. ಸಂಸ್ಕೃತ ಸುಭಾಷಿತಗಳ ಸೊಬಗಂತೂ ಜನಜನಿತವಾಗಿದೆ. ಆದುದರಿಂದ ಅವುಗಳನ್ನೂ ಸೇರಿಸಲಾಗಿದೆ. ಹೀಗೆ ಸಂಸ್ಕೃತ ಸಾಹಿತ್ಯದ ವಿವಿಧ ಪ್ರಕಾರಗಳ ಪರಿಚಯವನ್ನು ಮಾಡಿಸಿಕೊಡುವ ಉದ್ದೇಶವನ್ನು ಸಾಧ್ಯವಾದಷ್ಟು ಪೂರೈಸಲು ಪ್ರಯತ್ನಿಸಲಾಗಿದೆ. ಇಲ್ಲಿ ಕೊಟ್ಟಿರುವ ೧೫ ಪಾಠಗಳಲ್ಲಿ ಅರ್ಧದಷ್ಟು ಪಾಠಗಳನ್ನು ಮಾತ್ರ ಒಂದೊಂದುಸಲಕ್ಕೆ ಗೊತ್ತುಪಡಿಸುವ ಉದ್ದೇಶವಿರುವದರಿಂದ ಪಠ್ಯಭಾಗದ ಗಾತ್ರವು ಈ ಹಿಂದೆ ನಡೆದುಕೊಂಡು ಬಂದಷ್ಟೇ ಉಳಿಯುವದು.

ಈ ಸಂಕಲನದಲ್ಲಿ ಕೊಟ್ಟ ಭಾಗಗಳ ಕವಿಪರಿಚಯುವನ್ನು ಪೀಠಿಕೆಯಲ್ಲಿ ಕನ್ನಡದಲ್ಲಿ ಕೊಡಲಾಗಿದೆ. ವಿದ್ಯಾರ್ಥಿಗಳಿಗೆ ನೆರವಾಗಲು ಟಿಪ್ಪಣಿಗಳನ್ನೂ ಜೋಡಿಸಲಾಗಿದೆ. ಟಿಪ್ಪಣಿಗಳನ್ನು ಜೋಡಿಸುವಾಗ ಅಷ್ಟು ವಿಸ್ತಾರವೂ ಅಲ್ಲ ಅಷ್ಟು ಸಂಕ್ಷಿಪ್ತವೂ ಅಲ್ಲ ಎನ್ನುವ ಮಧ್ಯಮಾರ್ಗವನ್ನು ಅವಲಂಬಿಸಲಾಗಿದೆ.

ಈ ಸಂಕಲನವನ್ನು ಸಿದ್ಧಪಡಿಸಲು ಮಹತ್ತ್ವದ ಸಲಹೆ ಸೂಚನೆಗಳನ್ನು ಕೊಟ್ಟು ನೆರವಾದ ಸಂಪಾದಕ ಸಮಿತಿಯ ಹಿರಿಯ ಸದಸ್ಯರಾದ ಶ್ರೀ ಎಂ. ಪಿ. ಎಲ್. ಶಾಸ್ತ್ರಿ ಅವರಿಗೆ ನಾನು ಕೃತಜ್ಞನಾಗಿದ್ದೇನೆ. ಇದರ ಅಚ್ಚುಪ್ರತಿಯುನ್ನು ತಯಾರಿಸಲು ನೆರವಾದ ಶ್ರೀ ಇ. ಎಸ್. ಭೂವರಾಹನ್ ಅವರಿಗೂ, ಟಿಪ್ಪಣಿಗಳನ್ನು ಸಿದ್ಧಪಡಿಸಲು ನೆರವಾದ ಶ್ರೀ ಲಕ್ಷ್ಮೀತಾತಾಚಾರ್ಯ ಅವರಿಗೂ, ಕರಡಚ್ಚನ್ನು ಓದಲು ನೆರವಾದ ಶ್ರೀ ಎಚ್. ಬಿ. ರಾಜು ಅವರಿಗೂ ಕೃತಜ್ಞನಾಗಿದ್ದೇನೆ. ವಿದ್ಯಾರ್ಥಿಗಳಿಗೆ ಇನ್ನೂ ಹೆಚ್ಚು ಪ್ರಯೋಜನಕಾರಿಯಾಗುವ ದೃಷ್ಟಿಯಿಂದ ಈ ಮಂಜರಿಯ ಪಾಠವನ್ನು ಹೇಳುವ ಅಧ್ಯಾಪಕರು ಸಲಹೆ ಸೂಚನೆಗಳನ್ನು ಕಳುಹಿಸಲು ಸ್ವಾಗತವಿದೆ.

ಕೆ. ಟಿ. ಪಾಂಡುರಂಗಿ

# अनुक्रमणिका

# ಪೀಠಿಕೆ

ಸಂಸ್ಕೃತವಾಙ್ಮಯವು ಪ್ರಪಂಚದ ವಾಙ್ಮಯಗಳ ಇತಿಹಾಸದಲ್ಲಿಯೇ ಪ್ರಾಚೀನವಾದುದು. ಈ ವಾಙ್ಮಯವು ಕ್ರಿ.ಪೂ. ೧೫೦೦ರಿಂದ ಇಂದಿನವರೆಗೆ ವೇದಗಳು, ಇತಿಹಾಸಪುರಾಣಗಳು, ದಾರ್ಶನಿಕ ಗ್ರಂಥಗಳು, ಕಾವ್ಯ-ನಾಟಕ-ಅಲಂಕಾರಾದಿ ಗ್ರಂಥಗಳು, ಆಯುರ್ವೇದ-ಜ್ಯೋತಿಷ-ಸಂಗೀತ-ಶಿಲ್ಪಾದಿ ಗ್ರಂಥಗಳು ಹೀಗೆ ಬಹುಮುಖವಾಗಿ ಬೆಳೆದು ಬಂದಿದೆ. ಇವುಗಳಲ್ಲಿ ವೇದಗಳಿರುವ ಭಾಷೆಗೆ ವೈದಿಕಭಾಷೆಯೆಂದೂ ಇನ್ನಿತರ ಗ್ರಂಥಗಳಿರುವ ಭಾಷೆಗೆ ಲೌಕಿಕ ಅಥವಾ ಸಂಸ್ಕೃತ ಭಾಷೆಯೆಂದೂ ಹೆಸರು. ಸಂಸ್ಕೃತವೆಂಬ ಹೆಸರು ವಾಲ್ಮೀಕಿ ರಾಮಾಯಣದಲ್ಲಿ ಮೊದಲು ದೊರೆಯುತ್ತದೆ.

ಭಾಷೆಯ ಸ್ವರೂಪದ ದೃಷ್ಟಿಯಿಂದ ಹೇಳುವದಾದರೆ ಪಾಣಿನಿಯ ಸೂತ್ರಗಳಲ್ಲಿ ವಿವರಿಸಲ್ಪಟ್ಟಿರುವ ಭಾಷೆಯು ಸಂಸ್ಕೃತ ಭಾಷೆಯು. ಪಾಣಿನಿಯ ನಿಯಮಗಳು ಶಾಸ್ತ್ರೀಯವೂ ಸರ್ವಾಂಗಪೂರ್ಣವೂ ಆಗಿರುವದರಿಂದ ಅವನ ನಿಯಮಗಳಿಂದ ವ್ಯವಸ್ಥೆಗೊಳಿಸಲ್ಪಟ್ಟ ಸಂಸ್ಕೃತ ಭಾಷೆಯು ಅಂದಿನಿಂದ ಇಂದಿನವರೆಗೆ ಅಚ್ಚಳಿಯದೆ ಉಳಿದಿದೆ.

ಸಂಸ್ಕೃತವಾಙ್ಮಯದ ವಿವಿಧ ಅಂಗಗಳಲ್ಲಿ, ಕಾವ್ಯ-ನಾಟಕ-ಗದ್ಯ-ಚಂಪೂ-ಸ್ತೋತ್ರ-ಸುಭಾಷಿತಾದಿ ಅನೇಕ ಪ್ರಕಾರಗಳಲ್ಲಿ ಬೆಳೆದು ಬಂದ ಅಂಗವು 'ಸಾಹಿತ್ಯ'ವೆಂಬ ಅಂಗವು. ಈ ಅಂಗಕ್ಕೆ ಆದಿಕವಿ ವಾಲ್ಮೀಕಿಮಹರ್ಷಿಗಳ ಆದಿಕಾವ್ಯ 'ರಾಮಾಯಣ'ವೇ ಉಗಮಸ್ಥಾನವು. ನದಿಗಳೆಲ್ಲ ಸಮುದ್ರದಿಂದಲೇ ನೀರನ್ನು ಪಡೆದು ಸಮುದ್ರವನ್ನೇ ಸೇರುವವು ಎಂಬಂತೆ ಸಂಸ್ಕೃತದಲ್ಲಿಯ ಎಲ್ಲ ಉತ್ತಮ ಕೃತಿಗಳೂ ಭಾಷೆ, ಕಥಾವಸ್ತು, ರಸಪುಷ್ಟಿ, ಕೃತಿರಚನೆಯ ಉದ್ದೇಶ, ಮೌಲ್ಯ ಇತ್ಯಾದಿಗಳಲ್ಲಿ ರಾಮಾಯಣದಿಂದಲೇ ಸ್ಫೂರ್ತಿಯನ್ನು ಪಡೆದು ರಾಮಾಯಣದ 'ಕ್ಷುಣ್ಣ' ಪಥದಲ್ಲಿಯೇ ಮುಂದುವರೆದಿರುವವು.

ನಮಗೆ ತಿಳಿದುಬಂದಿರುವ ಸಾಹಿತ್ಯಕೃತಿಗಳಲ್ಲಿ ಪಾಣಿನಿಯ 'ಜಾಂಬವತೀ ಪರಿಣಯ'ವೇ ಮೊದಲಿನದು. ಆದರೆ ಇದು ಉಪಲಬ್ಧವಿಲ್ಲ. ಪಾಣಿನಿಯ ತರುವಾಯ ಪತಂಜಲಿಯ ಮಹಾಭಾಷ್ಯದಲ್ಲಿ ಕಂಸವಧ, ಬಲಿಬಂಧ, ವಾಸವದತ್ತಾ, ಸುಮನೋತ್ತರಾ ಇತ್ಯಾದಿ ಕೆಲವು ಸಾಹಿತ್ಯಕೃತಿಗಳ ಉಲ್ಲೇಖವಿದೆ. ಆದರೆ ಅವೂ ಉಪಲಬ್ಧವಿಲ್ಲ. ಅವುಗಳ ಕಾಲಕರ್ತೃಗಳ ಸುಳಿವಿಲ್ಲ.

ಉಪಲಬ್ಧವಿದ್ದ ಉನ್ನತಮಟ್ಟದ ಸಾಹಿತ್ಯಕೃತಿಗಳಲ್ಲಿ, ನಾಟಕಗಳಲ್ಲಿ ಭಾಸನ ನಾಟಕಗಳು ಪ್ರಾಚೀನವಾದವುಗಳು. ಮಹಾಕಾವ್ಯಗಳಲ್ಲಿ ಕೆಲ ವಿದ್ವಾಂಸರ

ಅಭಿಪ್ರಾಯದಂತೆ ಅಶ್ವಘೋಷನ ಮಹಾಕಾವ್ಯಗಳು, ಇನ್ನು ಕೆಲವರ ಅಭಿಪ್ರಾಯ ದಂತೆ ಕಾಲಿದಾಸನ ಮಹಾಕಾವ್ಯಗಳು ಪ್ರಾಚೀನವಾದವುಗಳು. ಅಂದರೆ ಕ್ರಿ.ಪೂ. ೧ನೆಯ ಶತಮಾನದಿಂದ ಸಂಸ್ಕೃತಸಾಹಿತ್ಯದ ಉನ್ನತಕೃತಿಗಳು ಉಪಲಬ್ಧವಾಗಿರುವವು.

ಸಂಸ್ಕೃತಸಾಹಿತ್ಯಕೃತಿಗಳ ವಿವಿಧ ಪ್ರಕಾರಗಳನ್ನು ಹೀಗೆ ವಿಂಗಡಿಸಬಹುದು: ೧. ಮಹಾಕಾವ್ಯಗಳು, ೨. ನಾಟಕಗಳು ಮತ್ತು ವಿವಿಧ ರೂಪಕಪ್ರಕಾರಗಳು, ೩. ಗದ್ಯಕಾವ್ಯಗಳು, ೪. ಚಂಪೂಕಾವ್ಯಗಳು, ೫. ಖಂಡಕಾವ್ಯಗಳು–ಸಂದೇಶ ಕಾವ್ಯ, ಶತಕ, ಗೀತಕಾವ್ಯ, ಮುಕ್ತಕ–ಇತ್ಯಾದಿಗಳು, ೬. ಪಂಚತಂತ್ರ, ಹಿತೋಪದೇಶ ಇತ್ಯಾದಿ ನೀತಿಕಥೆಗಳು ಮತ್ತು ಕಥಾಸರಿತ್ಸಾಗರ, ಶುಕಸಪ್ತತಿ ಇತ್ಯಾದಿ ಕಥಾಸಂಗ್ರಹಗಳು, ೭. ಸ್ತೋತ್ರ ಹಾಗೂ ಭಕ್ತಿಸಾಹಿತ್ಯ, ೮. ಸುಭಾಷಿತಸಂಗ್ರಹಗಳು. ಈ ಎಲ್ಲ ಪ್ರಕಾರಗಳಲ್ಲಿಯೂ ಕ್ರಿ.ಪೂ. ಒಂದನೆಯ ಶತಕದಿಂದ ಇಂದಿನವರೆಗೆ ಲೌಕಿಕ ಸಂಸ್ಕೃತ ಸಾಹಿತ್ಯವು ವಿಪುಲವಾಗಿ ಬೆಳೆದಿದೆ. ಇವುಗಳಲ್ಲಿ ಕೆಲವು ಮುಖ್ಯವಾದ ಪ್ರಕಾರಗಳನ್ನೂ ಅವುಗಳನ್ನು ಬರೆದ ಕೆಲ ಪ್ರಮುಖ ಕವಿಗಳ ಕೃತಿಗಳನ್ನೂ ಪರಿಚಯಮಾಡಿಕೊಡುವ ದೃಷ್ಟಿಯಿಂದಲೂ ಸಂಸ್ಕೃತ ಭಾಷೆಯ ಸರಸ ಮತ್ತು ಪ್ರೌಢಶೈಲಿಗಳೆರಡರ ಪರಿಚಯವನ್ನು ಮಾಡಿಕೊಡುವ ದೃಷ್ಟಿಯಿಂದಲೂ, ಆಯಾ ಕವಿಗಳ ಕೃತಿಗಳಲ್ಲಿಯ ಉತ್ತಮ ವೆಂದು ಪರಿಗಣಿಸಲ್ಪಟ್ಟ ಕೆಲವು ಭಾಗಗಳನ್ನು ಆಯ್ದು ಈ ಸಂಸ್ಕೃತ ಗದ್ಯಪದ್ಯ ಮಂಜರಿಯನ್ನು ತಯಾರಿಸಲಾಗಿದೆ. ಈ ಮಂಜರಿಯಲ್ಲಿ ಆಯ್ದ ಭಾಗಗಳ ಕವಿಗಳ ಪರಿಚಯವನ್ನು ಮಾತ್ರ ಇಲ್ಲಿ ಪ್ರಸ್ತಾಪಿಸುತ್ತೇವೆ.

೨

'**ಕವಿಕಾವ್ಯಪ್ರಶಂಸಾ**' ಎಂಬ ಮೊದಲನೆಯ ಪಾಠದಲ್ಲಿ ಸಂಸ್ಕೃತದಲ್ಲಿ ಪ್ರಮುಖರಾದ ಕೆಲವು ಕವಿಗಳ ಪರಿಚಯವನ್ನು ಮಾಡಿಕೊಡಲಾಗಿದೆ. ಕಾವ್ಯದ ಗುಣ ಮತ್ತು ಪ್ರಯೋಜನಗಳನ್ನು ವಿವರಿಸುವ ಕೆಲವು ಶ್ಲೋಕಗಳನ್ನು ಕೊಡಲಾಗಿದೆ. ಆಯಾ ಕವಿಗಳ ವಿಷಯದಲ್ಲಿ ಪ್ರಚಲಿತವಿದ್ದ ಶ್ಲೋಕಗಳಿಂದಲೇ ಅವರವರ ಪರಿಚಯವನ್ನು ಮಾಡಿಕೊಡಲಾಗಿದೆ. ಶ್ರೀ ವ್ಯಾಸಮಹರ್ಷಿಗಳು ಮತ್ತು ಆದಿಕವಿ ವಾಲ್ಮೀಕಿಮಹರ್ಷಿಗಳ ವಂದನೆಯಿಂದ ನಮ್ಮ ಕವಿವಂದನೆಯು ಪ್ರಾರಂಭವಾಗಿದೆ. ಶ್ರೀ ವ್ಯಾಸರ ಮಹಾಭಾರತವು ಇತಿಹಾಸ, ಧರ್ಮ, ನೀತಿಗಳ ಆಕರವಾಗಿದ್ದಂತೆಯೇ ಸಾಹಿತ್ಯಕೃತಿಗಳ ನಿರ್ಮಾಣಕ್ಕೂ ಸ್ಫೂರ್ತಿ ಯನ್ನು ಒದಗಿಸಿದೆ. ನಲೋಪಾಖ್ಯಾನ, ಶಕುಂತಲೋಪಾಖ್ಯಾನ, ಅರ್ಜುನನ

ಪಾಶುಪತಾಸ್ತ್ರ ಸಂಪಾದನೆ, ಶಿಶುಪಾಲವಧ, ಶ್ರೀಕೃಷ್ಣದೌತ್ಯ ಇತ್ಯಾದಿಗಳು ಮುಂದಿನ ಸಾಹಿತ್ಯಕೃತಿಗಳಿಗೆ ವಸ್ತುಗಳನ್ನು ಒದಗಿಸಿವೆ. ಆದುದರಿಂದ ನಮ್ಮ ಕವಿವಂದನೆಯು ಶ್ರೀ ವ್ಯಾಸರ ವಂದನೆಯಿಂದ ಆರಂಭವಾದುದು ಯಥೋಚಿತ ವಾಗಿದೆ. ರಾಮಾಯಣವಂತೂ ಅನೇಕ ಕಾವ್ಯ-ನಾಟಕಗಳಿಗೆ ಮೂಲವಾಗಿದೆ. ಲೌಕಿಕ ಸಂಸ್ಕೃತಕ್ಕೆ ನೆಲಗಟ್ಟಾಗಿದೆ. ಕಾಲಿದಾಸ, ಅಶ್ವಘೋಷ, ಭವಭೂತಿ ಇತ್ಯಾದಿ ಮುಂದಿನ ಅನೇಕ ಕವಿಗಳ ಭಾಷೆ, ವಸ್ತು ಮತ್ತು ಶೈಲಿಗೆ ಮಾರ್ಗ ದರ್ಶಕವಾಗಿದೆ.

अथवा कृतवाग्द्वारे वंशेऽस्मिन् पूर्वसूरिभिः

ಎಂದು ಕಾಲಿದಾಸನು ವಾಲ್ಮೀಕಿಯನ್ನು ಸ್ಮರಿಸಿಕೊಳ್ಳುತ್ತಾನೆ.

' इदं कविभ्यः पूर्वेभ्यः '

ಎಂದು ಭವಭೂತಿಯು ವಾಲ್ಮೀಕಿಯನ್ನು ವಂದಿಸಿದ್ದಾನೆ. ಹೀಗೆಯೇ ಮುಂದಿನ ಎಲ್ಲ ಕವಿಗಳೂ ಒಂದಿಲ್ಲೊಂದು ರೀತಿಯಿಂದ ವಾಲ್ಮೀಕಿಗೆ ಋಣಿಯಾಗಿರುವದನ್ನು ಸೂಚಿಸಿದ್ದಾರೆ.

' ಸ್ವಪ್ನವಾಸವದತ್ತ 'ವೇ ಮೊದಲಾದ ಹದಿಮೂರು ನಾಟಕಗಳನ್ನು ಬರೆದ ಭಾಸನು ಕಾಲಿದಾಸನಿಗಿಂತ ಮೊದಲಿದ್ದವನು. ಕಾಲಿದಾಸನು ತನ್ನ 'ಮಾಲವಿಕಾಗ್ನಿಮಿತ್ರ'ದ ಪ್ರಸ್ತಾವನೆಯಲ್ಲಿ

' भासकविपुत्रसौमिल्लकादीनाम् '

ಎಂದು ಇವನನ್ನು ಉಲ್ಲೇಖಿಸುತ್ತಾನೆ. ಬಾಣಭಟ್ಟನು 'ಹರ್ಷಚರಿತ್ರೆ'ಯಲ್ಲಿ ಇವನನ್ನು ಪ್ರಶಂಸಿಸಿದ ಶ್ಲೋಕವನ್ನು ಇಲ್ಲಿ ಉಲ್ಲೇಖಿಸಿ ಇವನನ್ನು ವಂದಿಸಿದ್ದೇವೆ. ಇದರಲ್ಲಿ ಇವನ ನಾಟಕಗಳ ವೈಶಿಷ್ಟ್ಯಗಳನ್ನು ಸೂಚಿಸಲಾಗಿದೆ. ಮಹಾಭಾರತ, ರಾಮಾಯಣ ಮತ್ತು ಬೃಹತ್ಕಥೆಗಳನ್ನು ಆಧರಿಸಿ ಬರೆದ ಇವನ ನಾಟಕಗಳು ರಂಗಭೂಮಿಯಮೇಲೆ ಪ್ರದರ್ಶಿಸಲು ಹೆಚ್ಚು ಅನುಕೂಲವಾಗಿವೆ. ಮಾರ್ಮಿಕ ವಾದ ಸನ್ನಿವೇಶಗಳಿಂದ ಕೂಡಿವೆ. ಇಲ್ಲಿ ವಂದಿಸಿದ ಕಾಲಿದಾಸ, ಬಾಣಭಟ್ಟ ಮತ್ತು ಭಾರವಿಕವಿಗಳ ಕೃತಿಗಳಿಂದ ಆಯ್ದ ಭಾಗಗಳನ್ನು ಈ ಗದ್ಯಪದ್ಯ ಮಂಜರಿ ಯಲ್ಲಿ ಸೇರಿಸಿರುವದರಿಂದ ಅವರ ವಿಷಯವನ್ನು ಮುಂದೆ ವಿವರವಾಗಿ ಚರ್ಚಿಸುವೆವು.

' ದಶಕುಮಾರಚರಿತ'ವೆಂಬ ಗದ್ಯಕಾವ್ಯವನ್ನು ಬರೆದ ದಂಡಿಯು ಸಂಸ್ಕೃತ ದಲ್ಲಿ ಅಗ್ರಗಣ್ಯರಾದ ಮೂವರು ಗದ್ಯಕವಿಗಳಲ್ಲಿ–ಸುಬಂಧು, ಬಾಣಭಟ್ಟ, ದಂಡಿ–ಇವರಲ್ಲಿ ಓರ್ವನು. ' दण्डिनः पदलालित्यम् ' ಎಂದು ಇವನು ಪದಲಾಲಿತ್ಯಕ್ಕೆ ಪ್ರಸಿದ್ಧನಾಗಿರುವನು. ಇವನು ' ಕಾವ್ಯಾದರ್ಶ ' ಮತ್ತು ' ಅವಂತಿ ಸುಂದರೀ

ಕಥಾ' ಎಂಬ ಇನ್ನೂ ಎರಡು ಗ್ರಂಥಗಳನ್ನು ಬರೆದಿರುವನು. 'ಕಾವ್ಯಾದರ್ಶ' ವನ್ನು ಬರೆದ ದಂಡಿಯು ಬೇರೆಯೆಂದೂ ಕೆಲವರ ಅಭಿಪ್ರಾಯವಿರುವದು. ಇವನು ಎಂಟನೆಯ ಶತಮಾನದ ವಾಮನನಿಗಿಂತ ಮೊದಲು ಅಂದರೆ ಏಳನೆಯ ಶತಮಾನದಲ್ಲಿದ್ದನು.

'ಉತ್ತರರಾಮಚರಿತ್ರ'ವೇ ಮೊದಲಾದ ಮೂರು ನಾಟಕಗಳನ್ನು ಬರೆದ ಭವಭೂತಿಯು ಏಳನೆಯ ಶತಕದ ಉತ್ತರಾರ್ಧದಲ್ಲಿದ್ದ ಕನೋಜದ ಯಶೋವರ್ಮ ರಾಜನ ಆಸ್ಥಾನಕವಿಯಾಗಿದ್ದನು. ಇವನು ಕರುಣರಸವನ್ನು ಚಿತ್ರಿಸುವದರಲ್ಲಿ ಎತ್ತಿದ ಕೈ ಎನಿಸಿದವನು. ಸೀತೆಯು ಮತ್ತೆ ಶ್ರೀರಾಮನನ್ನು ಕೂಡಿಕೊಳ್ಳುವದು ಉತ್ತರರಾಮಚರಿತದ ಕಥಾವಸ್ತುವಿನ ವೈಶಿಷ್ಟ್ಯ. ಇವನ 'ಮಾಲತೀಮಾಧವ' ವೆಂಬ ಇನ್ನೊಂದು ನಾಟಕವು ಕಲ್ಪಿತವಸ್ತುವುಳ್ಳದ್ದೂ ಪ್ರೇಮವನ್ನು ಚಿತ್ರಿಸುವದೂ ಆಗಿದ್ದು ಕಾಪಾಲಿಕರೇ ಮೊದಲಾದ ಪಾತ್ರಚಿತ್ರಣದಿಂದ ಅಂದಿನ ಸಮಾಜದಲ್ಲಿಯ ಕೆಲವು ವರ್ಗಗಳ ಸ್ಥಿತಿಗತಿಗಳನ್ನು ತಿಳಿಸುತ್ತದೆ.

ಬಾಣನಿಗೆ ಆಶ್ರಯದಾತನಾದ ಹರ್ಷನು ರತ್ನಾವಲೀ, ಪ್ರಿಯದರ್ಶಿಕಾ, ನಾಗಾನಂದವೆಂಬ ಮೂರು ನಾಟಕಗಳನ್ನು ಬರೆದಿರುವನು. ಇವನ 'ನಾಗಾನಂದ' ನಾಟಕವು ಅಹಿಂಸಾತತ್ತ್ವವನ್ನು ಬೋಧಿಸುತ್ತದೆ. ಸೂರ್ಯಶತಕವನ್ನು ಬರೆದ ಮಯೂರನೂ ಈ ಹರ್ಷನ ಆಸ್ಥಾನದಲ್ಲಿಯೇ ಇದ್ದನು.

'**ವಿಜ್ಜಿಕಾ**' ಅಥವಾ '**ವಿಜಯಾಂಬಿಕಾ**' ಎಂಬ ಸಂಸ್ಕೃತ ಕವಿಯಿತ್ರಿಯು 'ಕೌಮುದೀಮಹೋತ್ಸವ' ಎಂಬ ನಾಟಕವನ್ನು ಬರೆದಿದ್ದಾಳೆ. ಇವಳು ಸುಮಾರು ಏಳು-ಎಂಟನೆಯ ಶತಮಾನದವಳು. ಶ್ರೀ ಶಂಕರಾಚಾರ್ಯರನ್ನು ಸ್ತುತಿಸುವಳು. ದಂಡಿಯ ಗೇಲಿ ಮಾಡುವಳು. ಕರ್ಣಾಟಕ ರಾಜಪ್ರಿಯೆ, ಸರಸ್ವತಿ ಎಂದು ತನ್ನನ್ನು ನಿರ್ದೇಶಿಸಿಕೊಳ್ಳುವಳು. ಇವಳು ಎರಡನೆಯ ಪುಲಕೇಶಿಯ ಸೊಸೆ, ಚಂದ್ರಾದಿತ್ಯನ ಹೆಂಡತಿಯೆಂದು ಸಂಶೋಧಕರು ಊಹಿಸಿರುವರು. ಶೀಲಾ, ಮಾರುಲಾ ಇತ್ಯಾದಿ ಇನ್ನಿತರ ಸಂಸ್ಕೃತ ಕವಯಿತ್ರಿಯರ ಕೆಲವು ಬಿಡಿ ಪದ್ಯಗಳು ಮಾತ್ರ ದೊರೆಯುತ್ತವೆ.

ಮುರಾರಿಯು ಎಂಟನೆಯ ಶತಮಾನದವನು. 'ಅನರ್ಘರಾಘವ' ವೆಂಬ ನಾಟಕವನ್ನು ಬರೆದಿದ್ದಾನೆ. ತುಂಬ ಪ್ರೌಢವಾದ ಶೈಲಿಯಲ್ಲಿ ಬರೆದ ಈ ನಾಟಕವು ಪಂಡಿತರಿಗೆ ಪ್ರಿಯವಾಗಿದೆ.

ಇಲ್ಲಿ ಪರಿಚಯಮಾಡಿಕೊಟ್ಟ 'ಕವಿ'ಗಳಲ್ಲದೆ ಇನ್ನೂ ಅನೇಕ ಶ್ರೇಷ್ಠ ಮತ್ತು ಮಧ್ಯಮ ಕವಿಗಳು ಸಂಸ್ಕೃತದಲ್ಲಿರುವರು. ಆದರೆ ಈ ದೃಷ್ಟಿಯಲ್ಲಿ ವಿಷಯ ಸಂಗ್ರಹವನ್ನು ಮಾಡಲು ವಾಚಕರನ್ನು ಪ್ರಚೋದಿಸುವ ದೃಷ್ಟಿಯಿಂದ ಕೆಲವರನ್ನು ಮಾತ್ರ ಇಲ್ಲಿ ನಿರ್ದೇಶಿಸಲಾಗಿದೆ.

ಇಲ್ಲಿ ಕೊಟ್ಟ ಕಾವ್ಯವನ್ನು ಪ್ರಶಂಸಿಸುವ ಶ್ಲೋಕಗಳು ಗಂಗಾದೇವಿಯ 'ಮಧುರಾವಿಜಯ'ದ ಆರಂಭದಲ್ಲಿ ಬಂದವು. ಚಿಕ್ಕವೂ ಚೊಕ್ಕಟವೂ ಆದ ಈ ಶ್ಲೋಕಗಳು ತುಂಬ ಹೃದಯಗ್ರಾಹಿಯಾಗಿ, ಕಾವ್ಯದ ಬಗ್ಗೆ ಕೆಲವು ಮಾರ್ಮಿಕವಾದ ಮಾತುಗಳನ್ನು ಹೇಳುತ್ತವೆ.

೩

ಎರಡರಿಂದ ಆರರವರೆಗಿನ ಪಾಠಗಳನ್ನು ಕಾಲಿದಾಸ, ಭಾರವಿ, ಕುಮಾರದಾಸ, ಮಾಘ ಮತ್ತು ಗಂಗಾದೇವಿಯರು ವಿರಚಿಸಿದ ಮಹಾಕಾವ್ಯಗಳಿಂದ ಆಯ್ದುಕೊಳ್ಳಲಾಗಿದೆ. ಸಂಸ್ಕೃತ-ಮಹಾಕಾವ್ಯಗಳ ಲಕ್ಷಣಗಳನ್ನು ವಿಶ್ವನಾಥನು ಸಾಹಿತ್ಯದರ್ಪಣದಲ್ಲಿ ಹೀಗೆ ವಿವರಿಸಿದ್ದಾನೆ.

सर्गबन्धो महाकाव्यं तत्रैको नायकः सुरः
सद्वंशः क्षत्रियो वापि धीरोदात्तगुणान्वितः ॥ १ ॥

एकवंशभवा भूपाः कुलजा बहवोऽपि वा
शृङ्गारवीरशान्तानामेकोऽङ्गी रस इष्यते ॥ २ ॥

अङ्गानि सर्वेऽपि रसाः सर्वे नाटकसन्धयः
इतिहासोद्भवं वृत्तमन्यद्वा सज्जनाश्रयम् ॥ ३ ॥

चत्वारस्तस्य वर्गाः स्युस्तेष्वेकं च फलं भवेत्
आदौ नमस्क्रियाशीर्वा वस्तुनिर्देश एव वा ॥ ४ ॥

क्वचिन्निन्दा खलादीनां सतां च गुणकीर्तनम्
एकवृत्तमयैः पद्यैरवसानेऽन्यवृत्तकैः ॥ ५ ॥

नातिस्वल्पा नातिदीर्घा सर्गा अष्टाधिका इह
नानावृत्तमयः क्वापि सर्गः कश्चन दृश्यते ॥ ६ ॥

सर्गान्ते भाविसर्गस्य कथायाः सूचनं भवेत् ।
सन्ध्यासूर्येन्दुरजनीप्रदोषध्वान्तवासराः ॥ ७ ॥

प्रातर्मध्यान्हमृगया शैलर्तुवनसागराः
सम्भोगविप्रलम्भौ च मुनिस्वर्गपुराध्वराः ॥ ८ ॥

रणप्रयाणोपयममन्त्रपुत्रोदयादयः
वर्णनीया यथायोगं साङ्गोपाङ्गा अमी इह ॥ ९ ॥

कवेर्वृत्तस्य वा नाम्ना नायकस्येतरस्य वा
नामास्य सर्गोपादेयकथया सर्गनाम तु ॥ १० ॥

ಹದಿನೈದನೆಯ ಶತಮಾನದಲ್ಲಿ ಆಗಿಹೋದ ವಿಶ್ವನಾಥನಿಗೆ ಸಂಸ್ಕೃತದಲ್ಲಿಯ ಮುಖ್ಯವಾದ ಅನೇಕ ಮಹಾಕಾವ್ಯಗಳು ಉಪಲಬ್ಧವಿದ್ದುದರಿಂದ ಅವುಗಳ ಒಂದು ವಿಷಯಾನುಕ್ರಮಣಿಕೆಯನ್ನೇ ಇಲ್ಲಿ ಕೊಟ್ಟದ್ದಾನೆ.

೧. ಮಹಾಕಾವ್ಯವನ್ನು ಸರ್ಗಗಳನ್ನಾಗಿ ವಿಂಗಡಿಸಬೇಕು. ಈ ಸರ್ಗಗಳು ತುಂಬ ಚಿಕ್ಕದಾಗಿಯೂ ಇರಬಾರದು, ತುಂಬ ದೀರ್ಘವಾಗಿಯೂ ಇರಬಾರದು. (೩೦ ರಿಂದ ೨೦೦ ವರೆಗೆ ಶ್ಲೋಕಗಳಿರಬಹುದೆಂದು ಇನ್ನೊಂದೆಡೆಗೆ ಹೇಳಿದೆ.) ಒಂದು ಸರ್ಗದಲ್ಲಿ ಒಂದೇ ವೃತ್ತವಿರಬೇಕು. ಸರ್ಗದ ಕೊನೆಯ ಕೆಲವು ಶ್ಲೋಕಗಳಲ್ಲಿ ವೃತ್ತವನ್ನು ಬದಲಿಸಬೇಕು. ಯಾವುದಾದರೂ ಒಂದು ಸರ್ಗದಲ್ಲಿ ಮಾತ್ರ ಅನೇಕ ವೃತ್ತಗಳಲ್ಲಿ ರಚನೆಯ ಕೌಶಲ್ಯವನ್ನು ತೋರಿಸಬೇಕು. ಸರ್ಗದ ಕೊನೆಗೆ ಮುಂದಿನ ಸರ್ಗದ ಕಥೆಯನ್ನು ಸೂಚಿಸಬೇಕು. ಆಯಾ ಸರ್ಗದಲ್ಲಿ ಬಂದ ಕಥೆಯಿಂದ ಆಯಾ ಸರ್ಗಕ್ಕೆ ಹೆಸರನ್ನು ಕೊಡಬೇಕು.

೨. ಧೀರೋದಾತ್ತಗುಣವುಳ್ಳ ಓರ್ವ ಕ್ಷತ್ರಿಯ ಅಥವಾ ಸದ್ವಂಶದವನು ನಾಯಕನಾಗಿರಬೇಕು (ಶಿಶುಪಾಲವಧ). ಅಥವಾ ಒಂದೇ ವಂಶಕ್ಕೆ ಸೇರಿದ ಅನೇಕ ರಾಜರು ನಾಯಕರಾಗಿರಬೇಕು (ರಘುವಂಶ). ಇತಿಹಾಸ ಪುರಾಣಗಳಲ್ಲಿ ಬಂದ ಅಥವಾ ಓರ್ವ ಸಜ್ಜನನಿಗೆ ಸಂಬಂಧಿಸಿದ ಕಥಾವಸ್ತುವಿರಬೇಕು. ನಾಟಕದಲ್ಲಿಯಂತೆಯೇ ಈ ಕಥಾವಸ್ತುವನ್ನು ಮುಖ, ಪ್ರತಿಮುಖ ಇತ್ಯಾದಿ ಸಂಧಿಕ್ರಮದಲ್ಲಿ ಯೋಜಿಸಬೇಕು.

೩. ಶೃಂಗಾರ, ವೀರ ಅಥವಾ ಶಾಂತ ಇವುಗಳಲ್ಲಿ ಒಂದನ್ನು ಮುಖ್ಯರಸವನ್ನಾಗಿಯೂ ಉಳಿದ ರಸಗಳನ್ನು ಅಂಗರಸಗಳನ್ನಾಗಿಯೂ ಚಿತ್ರಿಸಬೇಕು.

೪. ನಾಲ್ಕು ಪುರುಷಾರ್ಥಗಳನ್ನೂ ಚಿತ್ರಿಸಬೇಕು. ಅವುಗಳಲ್ಲಿ ಒಂದನ್ನು ಮುಖ್ಯಗುರಿಯನ್ನಾಗಿಟ್ಟುಕೊಳ್ಳಬೇಕು.

೫. ಆರಂಭದ ಪದ್ಯದಲ್ಲಿ ನಮಸ್ಕಾರ, ಆಶೀರ್ವಾದ ಅಥವಾ ಕಥಾವಸ್ತುವಿನ ನಿರ್ದೇಶವಿರಬೇಕು. ಬಳಿಕ ಸಜ್ಜನರ ಪ್ರಶಂಸೆ, ದುರ್ಜನರ ನಿಂದೆಯಿರಬಹುದು. ಸಂಧ್ಯಾಕಾಲ, ಸೂರ್ಯ, ಚಂದ್ರ, ರಾತ್ರಿ, ಪ್ರದೋಷಸಮಯ, ಕತ್ತಲೆ, ಪ್ರಭಾತ, ಮಧ್ಯಾಹ್ನ, ಬೇಟೆ, ಪರ್ವತ, ಋತುಗಳು, ಸಮುದ್ರ, ಸಂಭೋಗಶೃಂಗಾರ, ವಿಪ್ರಲಂಭಶೃಂಗಾರ, ಋಷಿಗಳು, ಸ್ವರ್ಗ, ನಗರ, ರಾಜಬೀದಿ, ಯುದ್ಧ, ದಂಡಯಾತ್ರೆ, ವಿವಾಹ, ಮಂತ್ರಾಲೋಚನೆ, ಪುತ್ರಜನ್ಮ, ಇತ್ಯಾದಿ ವಿಷಯಗಳನ್ನು ಸಾಂಗೋಪಾಂಗವಾಗಿ ವರ್ಣಿಸಬೇಕು.

೬. ಕಾವ್ಯದ ಹೆಸರನ್ನು ಕವಿ, ಕಥಾನಾಯಕ, ಕಥಾವಸ್ತು, ಅಥವಾ ಇನ್ನು ಯಾವದಾದರೂ ಪ್ರಮುಖ ವ್ಯಕ್ತಿ, ಅಥವಾ ಘಟನೆಯನ್ನಾಧರಿಸಿ ಇಡಬಹುದು.

ಇಲ್ಲಿಯ ವಿವರಗಳು ಸಂಸ್ಕೃತದಲ್ಲಿಯ ಪ್ರಮುಖವಾದ ಮಹಾಕಾವ್ಯಗಳ ವಿಷಯಾನುಕ್ರಮಣಿಕೆಯಂತಿದ್ದು ಅವುಗಳ ಬಾಹ್ಯಸ್ವರೂಪವನ್ನು ಮಾತ್ರ ವಿವರಿಸುವಂತೆ ಕಂಡರೂ ಕಾವ್ಯಗಳ ಸ್ವರೂಪ ಮತ್ತು ಉದ್ದೇಶಗಳ ಬಗೆಗೆ ಕೆಲವು ಮಹತ್ವದ ಅಂಶಗಳೂ ಹೇಳಲ್ಪಟ್ಟವೆ. ಒಂದು ರಸವು ಪ್ರಧಾನವಾಗಿ ಚಿತ್ರಿಸಲ್ಪಡಬೇಕು ಮತ್ತು ಒಂದು ಪುರುಷಾರ್ಥವು ಫಲವಾಗಿರಬೇಕು ಎಂಬುವು ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶಗಳು. ಕಾವ್ಯದಿಂದ ಆನಂದವೂ ಉಪದೇಶವೂ ದೊರೆಯಬೇಕೆಂಬ ದ್ವಿಮುಖ ಉದ್ದೇಶವು ಇದರಲ್ಲಿ ಅಡಗಿದೆ. ಕಾವ್ಯವು ಕಲೆಯೂ ಹೌದು, ಜೀವನಕ್ಕೆ ಮಾರ್ಗದರ್ಶಕವೂ ಹೌದು ಎಂಬ ತತ್ತ್ವವನ್ನು ಒಪ್ಪಿಕೊಂಡುದು ಇದರಿಂದ ಸ್ಪಷ್ಟವಾಗುತ್ತದೆ. ಈ ಎರಡು ಅಂಶಗಳನ್ನು ಮುಖ್ಯವಾಗಿ ಗಮನಿಸಿದರೆ ಇನ್ನುಳಿದವು ಕೇವಲ ಯಾವ ಯಾವ ವಿಷಯಗಳನ್ನು ಸೇರಿಸಬಹುದೆಂಬುದಕ್ಕೆ ಸೂಚನೆಗಳು ಮಾತ್ರ. ಅವು ನಿರ್ಬಂಧಗಳೆಂದು ಪರಿಗಣಿಸುವ ಅಗತ್ಯವಿಲ್ಲ. ಹೀಗೆ ಸೂಚಿಸಿದ ವಿಷಯಗಳಲ್ಲಿಯೂ ನಿಸರ್ಗದ ಸೌಂದರ್ಯವನ್ನೂ ಮಾನವನ ಭಾವನೆಗಳನ್ನೂ ವ್ಯಕ್ತಪಡಿಸಲು ಅನುಕೂಲವಾದ ಅಂಶಗಳೇ ಹೆಚ್ಚಾಗಿರುವದನ್ನೂ ಗಮನಿಸಬಹುದು. ಇವುಗಳ ನಿರೂಪಣೆಯಲ್ಲಿ ಚೈತನ್ಯವನ್ನೂ ಕಲ್ಪನಾಚಾತುರ್ಯವನ್ನೂ ತುಂಬುವದು ಆಯಾ ಕವಿಗಳಿಗೆ ಸೇರಿದ ವಿಷಯ. ಅದಿಲ್ಲದ್ದಕ್ಕೆ ಲಕ್ಷಣಕಾರರನ್ನು ದೂಷಿಸಿ ಪ್ರಯೋಜನವಿಲ್ಲ.

दृष्टपूर्वा अपिह्यर्थाः काव्ये रसपरिग्रहात् ।
सर्वे नवा इवाभान्ति मधुमास इव द्रुमाः ॥

'ವಸಂತಋತುವಿನಲ್ಲಿ ಗಿಡ-ಬಳ್ಳಿಗಳು ಮತ್ತೆ ಚಿಗುರಿ ನಿಲ್ಲುವಂತೆ, ರಸವತ್ತಾಗಿ ನಿರೂಪಿಸಿದರೆ ಪರಿಚಿತ ವಿಷಯಗಳೇ ಸುಂದರವಾಗಿ ಕಾಣುವವು' ಎಂದು ಆನಂದವರ್ಧನನು ಈ ಅಂಶವನ್ನು ಸೊಗಸಾಗಿ ನಿರೂಪಿಸಿದ್ದಾನೆ.

ಳ

ಈ ಲಕ್ಷಣಗಳನ್ನು ಪಡೆದ ಸಂಸ್ಕೃತ ಮಹಾಕಾವ್ಯಗಳಲ್ಲಿ ಐದು ಮಹಾಕಾವ್ಯಗಳಿಂದ ಆಯ್ದ ಭಾಗಗಳನ್ನು ಎರಡರಿಂದ ಆರರವರೆಗಿನ ಪಾಠಗಳಲ್ಲಿ ಈ ಮಂಜರಿಯಲ್ಲಿ ಕೊಡಲಾಗಿದೆ. 'ಅತಿಥೇಃ ರಾಜನೀತಿಃ' 'ಸಹಸಾ ವಿದಧೀತ ನ ಕ್ರಿಯಾಮ್' 'ಕ್ರಿಯಾ ಕೇವಲಮುತ್ತರಮ್' ಎಂಬ ಎರಡು, ಮೂರು ಮತ್ತು ಐದನೆಯ ಪಾಠಗಳಲ್ಲಿ ರಾಜನೀತಿಯ ವಿಚಾರವು ಬಂದಿದೆ. ಎರಡನೆಯ ಪಾಠದಲ್ಲಿ ರಾಜನೀತಿಯ ಸಾಮಾನ್ಯ ವಿಚಾರವು ಬಂದಿದೆ. ಈ ಭಾಗವನ್ನು ಮಹಾಕವಿ ಕಾಲಿದಾಸನ 'ರಘುವಂಶ' ಮಹಾಕಾವ್ಯದ ಹದಿನೇಳನೆಯ ಸರ್ಗದಿಂದ ಆಯ್ದುಕೊಳ್ಳಲಾಗಿದೆ. ಕುಶನ ಮಗನಾದ ಅತಿಥಿಯ ರಾಜನೀತಿ ಕೌಶಲವು ಇಲ್ಲಿ ವರ್ಣಿಸಲ್ಪಟ್ಟಿದೆ.

'ರಾಜನಾದವನು ಬಾಹ್ಯಶತ್ರುಗಳನ್ನು ಜಯಿಸುವಷ್ಟೇ ಆಂತರಿಕ ಶತ್ರುಗಳನ್ನು ಜಯಿಸುವದೂ ಅಗತ್ಯವಿದೆ. ಕಾಮಕ್ರೋಧಾದಿ ಅರಿಷಡ್ವರ್ಗಗಳೇ ಅಂತಃಶತ್ರುಗಳು. ಕೇವಲ ಸಾಮೋಪಾಯದ ನೀತಿಯೂ ಸಲ್ಲದು. ಕೇವಲ ಶೌರ್ಯ ತೋರಿಸುವದೂ ಸಲ್ಲದು. ಗೂಢಚಾರರಿಂದ ಎಲ್ಲವನ್ನೂ ತಿಳಿದುಕೊಂಡಿರಬೇಕು. ಮಂತ್ರಿಗಳೊಡನೆ ಸಮಾಲೋಚಿಸಬೇಕು. ಆದರೆ ಸ್ವಾಭಿಪ್ರಾಯವನ್ನು ಅಕಾಲದಲ್ಲಿ ಪ್ರಕಟಿಸಬಾರದು. ಕೋಟೆಕೊತ್ತಲಗಳನ್ನು ಶತ್ರುಗಳು ಆಕ್ರಮಿತರಾದಾಗಲೂ ಭದ್ರವಾಗಿಟ್ಟುಕೊಳ್ಳಬೇಕು. ಪ್ರಜೆಗಳು ದುರ್ಮಾರ್ಗಿಗಳಾಗದಂತೆ ನೋಡಿಕೊಳ್ಳಬೇಕು. ಧರ್ಮಾರ್ಥಕಾಮಗಳನ್ನು ಪರಸ್ಪರ ಆತಂಕವಾಗುವಂತೆ ಅನುಸರಿಸಬಾರದು. ಸಮಬಲರಾದ ಮಿತ್ರರನ್ನು ಪಡೆದಿರಬೇಕು. ಅರ್ಥಸಂಪತ್ತನ್ನು ಪಡೆದಿರಬೇಕು. ಪ್ರಭು, ಮಂತ್ರಿ, ಉತ್ಸಾಹ ಶಕ್ತಿಗಳನ್ನು ಪಡೆದಿರಬೇಕು' ಎಂದು ರಾಜನೀತಿಯ ಮುಖ್ಯತತ್ತ್ವಗಳನ್ನು ಅತಿಥಿಯ ರಾಜನೀತಿಯ ವರ್ಣನೆಯ ಮೂಲಕ ಸುಂದರವಾಗಿ ನಿರೂಪಿಸಲಾಗಿದೆ. ಯಾವ ವಿಷಯವನ್ನು ಆಯ್ದುಕೊಂಡರೂ ಸರಸವಾಗಿಯೂ ಸ್ಫುಟವಾಗಿಯೂ ನಿರೂಪಿಸುವ ಕಾಲಿದಾಸನು ಇಲ್ಲಿ ರಾಜನೀತಿಯ ಮುಖ್ಯಾಂಶಗಳನ್ನು ಚಾತುರ್ಯದಿಂದ ನಿರೂಪಿಸಿದ್ದಾನೆ.

ಮೂರನೆಯ ಪಾಠದಲ್ಲಿ ರಾಜನೀತಿಯಲ್ಲಿ ತಾಳ್ಮೆಯ ಮಹತ್ವವನ್ನು ವಿವರಿಸಲಾಗಿದೆ. ಇದನ್ನು ಭಾರವಿಯ 'ಕಿರಾತಾರ್ಜುನೀಯ'ದಿಂದ ಆಯ್ದುಕೊಳ್ಳಲಾಗಿದೆ. ದುರ್ಯೋಧನನು ದಿನೇ ದಿನೇ ಪ್ರಬಲನಾಗುತ್ತಿರುವನು ಎಂಬ ಸಮಾಚಾರವನ್ನು ಕೇಳಿ ಕೂಡಲೇ ಅವನ ಮೇಲೆ ಪ್ರತೀಕಾರವನ್ನು ಮಾಡಬೇಕೆಂದು ದ್ರೌಪದಿಯು ವಾದಿಸುವಳು. ಇದನ್ನು ಸಮರ್ಥಿಸಿ ಭೀಮನು ಮಾತನಾಡುವನು. ಇವರಿಬ್ಬರಿಗೂ ಯುಧಿಷ್ಠಿರನು ತಾಳ್ಮೆಯನ್ನು ಬೋಧಿಸುವನು.

'ದುಡುಕಿನಿಂದ ಯಾವ ಕೆಲಸವನ್ನೂ ಮಾಡಬಾರದು. ರಾಜನೀತಿಜ್ಞಾನ, ಶಾಂತಿ, ಪರಾಕ್ರಮ, ರಾಜನೀತಿ ಕೌಶಲ ಇವುಪರಸ್ಪರ ಸಹಕಾರದಿಂದ ಮುಂದುವರೆಯಬೇಕು. ಕೋಪವು ಶಕ್ತಿಯ ಹ್ರಾಸವನ್ನೇ ಮಾಡುವದು. ಕ್ಷಮಾಗುಣವನ್ನು ಕಳೆದುಕೊಂಡರೆ ಸಕಾಲ ಮತ್ತು ಸರಿಯಾದ ಸಾಧನಗಳ ಪರಿಜ್ಞಾನವೇ ತಪ್ಪಿಹೋಗುವದು. ನಮ್ಮ ಶರೀರೇಂದ್ರಿಯಗಳಿಗೇ ಕಷ್ಟವಾಗುವದು. ನೀತಿಯ ಮಾರ್ಗವು ತಪ್ಪಿಹೋಗುವದು. ಅಹಂಕಾರಕ್ಕೆ ವಶನಾದ ರಾಜನು ಮೂರ್ಖತನದಿಂದ ವರ್ತಿಸುವನು. ಮೂರ್ಖನು ನೀತಿಯನ್ನು ಕೈಬಿಡುವನು. ನೀತಿಯನ್ನು ಬಿಟ್ಟ ರಾಜನಲ್ಲಿ ಜನರು ಪ್ರೀತಿಯನ್ನು ಕಳೆದುಕೊಳ್ಳುವರು. ಜನಪ್ರಿಯತೆಯನ್ನು ಕಳೆದುಕೊಂಡ ಶತ್ರು ರಾಜನನ್ನು ನಿರ್ಮೂಲಗೊಳಿಸುವದು ಸುಲಭ' ಎಂದು

ತಾಳ್ಮೆಯನ್ನು ಬೋಧಿಸುವನು. ಈ ಚಿಕ್ಕ ಭಾಗದಲ್ಲಿಯೇ ಭಾರವಿಯ ಶೈಲಿಯಲ್ಲಿಯ ಶಬ್ದಸೌಷ್ಠವ, ಅರ್ಥಗಾಂಭೀರ್ಯ ಮತ್ತು ನಿರೂಪಣೆಯ ಕೌಶಲವನ್ನು ನೋಡಬಹುದು. ದ್ರೌಪದಿ, ಭೀಮ ಮತ್ತು ಯುಧಿಷ್ಠಿರರ ಮಾತುಗಳು ವಕ್ತೃತ್ವ ಕಲೆಯ ಉತ್ತಮ ನಿದರ್ಶನಗಳಾಗಿವೆ.

ಐದನೆಯ ಪಾಠದಲ್ಲಿ ರಾಜನೀತಿಯಲ್ಲಿ ಕೂಡಲೇ ಕಾರ್ಯತತ್ಪರರಾಗುವ ಅಗತ್ಯವನ್ನು ಬಲವತ್ತರವಾಗಿ ಪ್ರತಿಪಾದಿಸಲಾಗಿದೆ. ಮಾಘಕವಿಯ 'ಶಿಶುಪಾಲವಧ' ಕಾವ್ಯದ ಎರಡನೆಯ ಸರ್ಗದಿಂದ ಆಯ್ದ ಈ ಭಾಗದಲ್ಲಿ ಮೊದಲು ಶ್ರೀಕೃಷ್ಣನು 'ಶಿಶುಪಾಲನು ಲೋಕಕಂಟಕನಾದುದರಿಂದ ಅವನನ್ನು ಸದೆಬಡೆಯಲೇಬೇಕು. ಬೆಳೆಯುತ್ತಿರುವ ರೋಗವನ್ನು ಅಲಕ್ಷಿಸದೇ ಇರುವಂತೆ ಬೆಳೆಯುತ್ತಿರುವ ಶತ್ರುವನ್ನೂ ಅಲಕ್ಷಿಸಬಾರದು' ಎಂದು ಸೂಚಿಸುವನು. ಇದನ್ನು ಸಮರ್ಥಿಸುತ್ತ ಬಲರಾಮನು 'ಜಟಿಲವಾದ ರಾಜನೀತಿಯನ್ನು ಆಮೂಲಾಗ್ರವಾಗಿ ವಿವರಿಸುವದು ಸುಲಭವಲ್ಲ. ಆದರೆ ನಮ್ಮ ಉನ್ನತಿ ಶತ್ರುಗಳ ಅವನತಿ ಇವೆರಡೇ ಮುಖ್ಯವಾಗಿ ಸಾಧಿಸಬೇಕಾದ ಅಂಶಗಳು. ಅಲ್ಪಜಯದಿಂದ ಸಂತುಷ್ಟರಾದವರನ್ನು ಅದೃಷ್ಟವು ಕೈಬಿಡುವದು. ಶತ್ರುಗಳನ್ನು ಬೇರುಸಹಿತ ಕೀಳದೆ ನಮ್ಮ ಪ್ರತಿಷ್ಠೆಯಾಗಲಾರದು. ಒಮ್ಮೆ ವೈರವನ್ನು ಮಾಡಿ ಉದಾಸೀನರಾಗಿರುವದೆಂದರೆ ಬೆಂಕಿಯನ್ನು ಕಂಕುಳಲ್ಲಿ ಇಟ್ಟುಕೊಂಡು ತಿರುಗಿದ ಹಾಗೆಯೇ ಸರಿ. ದಂಡೋಪಾಯಸಾಧ್ಯನಾದ ಶತ್ರುವಿನಮೇಲೆ ಸಾಮೋಪಾಯವನ್ನು ಪ್ರಯೋಗಿಸುವದು ಜ್ವರದಿಂದ ಬಳಲುವವನಿಗೆ ತಣ್ಣೀರಿನ ಸ್ನಾನವನ್ನು ಹಾಕಿದಂತೆ' ಎಂದು ವಾದಿಸುವನು.

ಮಾಘನ ಶೈಲಿಯು ಪ್ರೌಢವೂ ವರ್ಣನಪ್ರಧಾನವೂ ಆಗಿದ್ದರೂ ಇಲ್ಲಿ ಸುಲಭವಾದ ಮತ್ತು ಹರಿತಾದ ಶೈಲಿಯನ್ನು ಕಾಣಬಹುದು.

ಹೀಗೆ ರಾಜನೀತಿಯ ವಿಷಯದಲ್ಲಿ ಮೂವರು ಮಹಾಕವಿಗಳು ಆಯಾ ಸಂದರ್ಭಕ್ಕನುಸರಿಸಿ ವ್ಯಕ್ತಪಡಿಸಿದ ಅಭಿಪ್ರಾಯಗಳು ಮನನೀಯವಾಗಿವೆ. ಕೌಟಲ್ಯನ ಅರ್ಥಶಾಸ್ತ್ರವೇ ಮೊದಲಾದ ರಾಜನೀತಿಗ್ರಂಥಗಳಲ್ಲಿ ಬಂದ ಅಂಶಗಳ ಸುಂದರ ನಿರೂಪಣೆಯಲ್ಲದೆ ಹೃದಯಗ್ರಾಹಿಯಾದ ಉಪಮಾನಾದಿಗಳಿಂದ ಕಾವ್ಯಗುಣವೂ ಇಲ್ಲಿ ಸ್ಫುಟವಾಗಿ ಮೂಡಿಬಂದಿದೆ.

ಜ

ನಾಲ್ಕನೆಯ ಪಾಠವು ಕರುಣರಸಪ್ರಧಾನವಾದ ಭಾಗವು. ಕುಮಾರದಾಸನ 'ಜಾನಕೀಹರಣ'ದ ಮೊದಲನೆಯ ಸರ್ಗದಿಂದ ಆಯ್ದ ಈ ಭಾಗದಲ್ಲಿ, ದಶರಥನು

ಒಮ್ಮೆ ಬೇಟೆಯಾಡಲು ಹೋದಾಗ ಒಂದು ಜಿಂಕೆಯ ಬೆನ್ನಟ್ಟಿ ತಮಸಾನದಿಯ ಪ್ರದೇಶಕ್ಕೆ ಹೋಗಿ ನದಿಯಲ್ಲಿ ಓರ್ವ ಮುನಿಕುಮಾರನ ಬಿಂದಿಗೆಯ ಸದ್ದನ್ನು ಆನೆಯ ಸದ್ದೆಂದು ಭ್ರಮಿಸಿ ಬಾಣವನ್ನೆಸೆಯುವನು. ಮರ್ಮಸ್ಥಲದಲ್ಲಿ ತಾಡಿತ ನಾದ ಆ ಮುನಿಕುಮಾರನು ವಿಲಪಿಸತೊಡಗುವನು :—

' ಈ ವನದಲ್ಲಿ ವಾಸಿಸುವ, ವೃದ್ಧರಾದ, ಕಣ್ಣಿಲ್ಲದ ನನ್ನ ತಂದೆತಾಯಿಗಳಿಗೆ ಏಕಮಾತ್ರ ಸಹಾಯನಾದ ನನ್ನನ್ನು ಏಕೆ ಬಾಣದಿಂದ ಹೊಡೆದಿ ? ಒಂದರ ಕಡೆಗೆ ಗುರಿಯನ್ನಿಟ್ಟು ನೀನು ನಿರಪರಾಧಿಗಳಾದ ಮೂವರನ್ನು—ನಾನೇ ಕಣ್ಣೆನಂತಿರುವ ನನ್ನ ವೃದ್ಧ ತಂದೆ ತಾಯಿಗಳನ್ನು ಮತ್ತು ನನ್ನನ್ನು—ನಾಶಮಾಡಿರುವಿ. ನಾನು ಬ್ರಹ್ಮಚಾರಿಯು, ಅನಾಥನು, ನಿರಪರಾಧಿಯು, ಕಣ್ಣಿಲ್ಲದ ತಂದೆತಾಯಿಗಳಿಗೆ ಏಕಮಾತ್ರ ಸಹಾಯನು, ನಿಷ್ಕರುಣಿಯಾದ ನೀನು ಇವುಗಳಲ್ಲಿ ಯಾವುದನ್ನೂ ಗಣನೆಗೆ ತಂದುಕೊಳ್ಳಲಿಲ್ಲ. ಮರದ ತೊಗಟೆಗಳ ಬಟ್ಟೆಯನ್ನುಟ್ಟ, ಚಳಿ ಮತ್ತು ಬಿಸಿಲುಗಳಿಗೆ ಸಿಕ್ಕು ನಿಸ್ಸಾರನಾದ, ವನದಲ್ಲಿಯ ಆಹಾರವನ್ನು ತೆಗೆದುಕೊಂಡು ಶಕ್ತಿಯು ಜೀರ್ಣವಾದ, ನಿನ್ನ ಅನುಕಂಪಕ್ಕೆ ಅರ್ಹನಾದ ನನ್ನನ್ನು ಕೊಂದಿರುವಿ. ಅರಗಿನಿಂದ ತೂತು ಮುಚ್ಚಿದ ಹಳೆಯ ಬಿಂದಿಗೆ, ಹುಲ್ಲಿನ ಉಡುದಾರ, ವಲ್ಕಲಬಟ್ಟೆ ಇವುಗಳಲ್ಲಿ ಯಾವುದರ ಆಸೆಯಿಂದ ನನ್ನನ್ನು ಕೊಂದೆಯೋ ಅದನ್ನು ತೆಗೆದುಕೊಂಡು ಕೃತಾರ್ಥನಾಗು. ಸಜ್ಜನರು ಶತ್ರುವಿನಮೇಲೆಯೂ ಕರುಣಾದೃಷ್ಟಿಯನ್ನು ಬೀರುವರು. ಆದರೆ ದುರ್ಜನರು ನಿಷ್ಕಾರಣವೈರವನ್ನು ಮಾಡುವರು. ಬಾಣಗಳ ಬಲದ ಗರ್ವವಿರುವ ನೀನು ಈ ನೀಚಕೃತ್ಯವನ್ನು ಮಾಡಿ ನಿನ್ನ ಕುಲಕ್ಕೆ ಕಲಂಕವನ್ನು ತಂದಿರುವಿ' ಎಂದು ವಿಲಪಿಸಿ ಪ್ರಾಣವನ್ನು ಬಿಡುವನು.

ಸಂಸ್ಕೃತ ಕಾವ್ಯಗಳಲ್ಲಿ ಕರುಣರಸಪ್ರಧಾನವಾದ ರತಿವಿಲಾಪ, ಅಜವಿಲಾಪ, ಇತ್ಯಾದಿ ಕೆಲವು ಸಂದರ್ಭಗಳಿವೆ. ಅಲ್ಲಿ ಅನುರಾಗಿಗಳ ವಿಲಾಪವಾದರೆ ಇಲ್ಲಿ ಮಾತಾಪಿತೃವಾತ್ಸಲ್ಯದಿಂದ ಕೂಡಿದ ಮುನಿಪುತ್ರನ ವಿಲಾಪ ಮರ್ಮಭೇದಕವಾಗಿ ಚಿತ್ರಿಸಲ್ಪಟ್ಟದೆ.

ಆರನೆಯ ಪಾಠವು ವೀರಾವೇಶವನ್ನು ಹುಟ್ಟಿಸುವ ಸಂದರ್ಭವನ್ನೊಳಗೊಂಡಿದೆ. ವಿಜಯನಗರದ ಬುಕ್ಕರಾಯನ ಸೊಸೆ ಗಂಗಾದೇವಿಯ 'ಮಧುರಾವಿಜಯ'ವೆಂಬ ಕಾವ್ಯದಿಂದ ಆಯ್ದುಕೊಂಡ ಈ ಭಾಗದಲ್ಲಿ ಮಧುರಾನಗರದ ಅಧಿದೇವತೆಯು ವೀರ ಕಂಪಣರಾಯನ ಕನಸಿನಲ್ಲಿ ಬಂದು ಮಧುರೆಯ ದುರವಸ್ಥೆಯನ್ನು ವರ್ಣಿಸುವಳು :—

ದೇವಾಲಯಗಳ ಬಾಗಿಲುಗಳೆಲ್ಲ ಹುಳ ತಿನ್ನುತ್ತಿವೆ. ಮಂಟಪಗಳ ಸಂದಿಗಳಲ್ಲಿ ಹುಲ್ಲು ಬೆಳೆದಿದೆ. ಗರ್ಭಗುಡಿಗಳು ಶಿಥಿಲವಾಗಿವೆ. ಮಂಗಲ ವಾದ್ಯಗಳ ಬದಲಾಗಿ ಬಾವುಲಿಗಳ ಸದ್ದು ಕೇಳಬರುತ್ತದೆ. ವೇದ ಘೋಷ

ಗಳ ಬದಲಾಗಿ ತುರುಷ್ಕರ ಗರ್ಜನೆ ಕೇಳಬರುತ್ತದೆ. ತೆಂಗಿನ ಮರಗಳು ಶೂಲದ ಕಂಬಗಳಾಗಿವೆ. ರಮಣಿಯರ ನೂಪುರಗಳ ಧ್ವನಿಯು ಬದಲಾಗಿ ದ್ವಿಜರಿಗೆ ಹಾಕಿದ ಬೇಡಿಗಳ ಸದ್ದು ಕೇಳಿಬರುತ್ತದೆ. ಗೋಪುರಗಳ ಮೇಲಿನ ಬೊಂಬೆಗಳಮೇಲೆ ಹೆಣೆದ ಜೇಡಗಳು ಜೀವಕಳೆದುಕೊಂಡ ಆ ಬೊಂಬೆಗಳಮೇಲೆ ಹೊದಿಸಿದ ಬಿಳಿಯ ರೇಶಿಮೆಯ ಬಟ್ಟೆಗಳಂತೆ ಕಾಣುತ್ತವೆ. ಮನೆಗಳ ಅಂಗಳಗಳಲ್ಲಿ ಪನ್ನೀರಿನ ಬದಲಾಗಿ ದ್ವಿಜರ ಕಣ್ಣೀರು ಸುರಿಯುತ್ತಲಿದೆ. ತಾಮ್ರಪರ್ಣೀ ನದಿಯಲ್ಲಿ ತರುಣಿಯರ ಸ್ತನಚಂದನದ ಬದಲಾಗಿ ಗೋವುಗಳ ರಕ್ತವು ಮಿಶ್ರತವಾಗುತ್ತಿದೆ. ಮಳೆ ಬೆಳೆಗಳಿಲ್ಲ. ಅಕಾಲಮೃತ್ಯುವು ಹೆಚ್ಚಾಗಿದೆ. ದ್ರವಿಡಮಹಿಳೆಯರ ಮುಖಗಳು ಬಾಡಿವೆ. ವಿದ್ಯೆ, ಧರ್ಮ, ನಡತೆ, ಕುಲೀನತೆ ಎಲ್ಲವೂ ಶಿಥಿಲವಾಗಿ ಕಲಿಕಾಲದ ಮಹಿಮೆಯು ಹೆಚ್ಚಾಗಿದೆ. ಹೀಗೆಂದು ಮಧುರೆಯ ದುರವಸ್ಥೆಯನ್ನು ವರ್ಣಿಸಿ ಹಿಂದೆ ಪಾಂಡ್ಯರಾಜರಿಗೆ ಕೊಟ್ಟ ಖಡ್ಗವನ್ನು ಅವನಿಗೆ ಕೊಟ್ಟು ಶತ್ರುಗಳನ್ನು ಸಂಹಾರಮಾಡು ಎಂದು ಅವನಲ್ಲಿ ವೀರಾವೇಶವನ್ನು ತುಂಬುವಳು.

ಇಲ್ಲಿಯ ಮಧುರೆಯ ದುರವಸ್ಥೆಯ ವರ್ಣನೆಯು ರಘುವಂಶದಲ್ಲಿ ಕುಶನು ರಾಜಧಾನಿಯನ್ನು ಬದಲಿಸಿದಮೇಲೆ ಅಯೋಧ್ಯೆಯ ಅಧಿದೇವತೆಯು ಅವನ ಕನಸಿನಲ್ಲಿ ಬಂದು ವರ್ಣಿಸಿದ ತನ್ನ ದುರವಸ್ಥೆಯ ವರ್ಣನೆಯನ್ನು ಕೆಲವಂಶಗಳಲ್ಲಿ ಹೋಲುತ್ತದಾದರೂ ಗಂಗಾದೇವಿಯು ತನ್ನ ಕಾಲದ ಐತಿಹಾಸಿಕ ಸನ್ನಿವೇಶಕ್ಕನುಸರಿಸಿ ಮಧುರೆಯ ದುರವಸ್ಥೆಯನ್ನು ಮನಸ್ಸು ಕರಗುವಂತೆ ವರ್ಣಿಸಿದ್ದಾಳೆ. ರಾಷ್ಟ್ರೀಯ ಭಾವನೆಯೂ ವೀರಾವೇಶವೂ ಕೆರಳುವಂತೆ ವರ್ಣಿಸಿದ್ದಾಳೆ.

ಹೀಗೆ ಈ ಐದು ಪಾಠಗಳಲ್ಲಿಯೂ ಐದು ಮಹಾಕಾವ್ಯಗಳಲ್ಲಿಯ ಹೃದಯಸ್ಪರ್ಶಿಯಾದ ಭಾಗಗಳನ್ನು ಆಯ್ದು ಕೊಡಲಾಗಿದೆ. ಇನ್ನು ಈ ಐದೂ ಕವಿಗಳ ಕಾಲದೇಶಗಳ ವಿಚಾರವನ್ನು ಸಂಕ್ಷಿಪ್ತವಾಗಿ ನೋಡೋಣ.

೬

ಮಹಾಕವಿ ಕಾಲಿದಾಸನ ಕಾಲದ ವಿಚಾರವು ಅನೇಕ ವರ್ಷಗಳಿಂದ ಚರ್ಚಿಸಲ್ಪಡುತ್ತಿದ್ದರೂ ಇಂದಿಗೂ ವಿದ್ವಾಂಸರಲ್ಲಿ ಏಕಾಭಿಪ್ರಾಯವುಂಟಾಗಿಲ್ಲ. ಕಾಲಿದಾಸನು ರಚಿಸಿದ 'ಮಾಲವಿಕಾಗ್ನಿಮಿತ್ರ' ನಾಟಕದ ನಾಯಕನಾದ ಅಗ್ನಿಮಿತ್ರನು ಐತಿಹಾಸಿಕ ವ್ಯಕ್ತಿಯಾಗಿದ್ದು ಕ್ರಿ.ಪೂ. ೧೫೦ ರ ಸುಮಾರಿಗೆ ಆಗಿಹೋದವನಾದ್ದರಿಂದ ಅದು ಕಾಲಿದಾಸನ ಕಾಲದ ಆಚೆಯ ಮಿತಿ; ಕ್ರಿ.ಶ.೬೩೪ ರ ಐಹೊಳೆಶಿಲಾಶಾಸನದಲ್ಲಿ ಕಾಲಿದಾಸನ ಹೆಸರು ಉಲ್ಲೇಖಿಸಲ್ಪಟ್ಟಿರುವದರಿಂದ ಅದು

ಅವನ ಕಾಲದ ಈಚೆಯ ಮಿತಿ ಎಂದು ಮಾತ್ರ ನಿಶ್ಚಿತವಾಗಿ ಹೇಳಬಹುದು. ಆದುದರಿಂದ ಈ ಕಾಲಗಳ ವ್ಯಾಪ್ತಿಯ ಹೊರಗೆ ಅವನ ಕಾಲವನ್ನು ಊಹಿಸುವ ವಿಚಾರಗಳನ್ನೆಲ್ಲ ಕೈಬಿಟ್ಟರೆ ಅವನು ಕ್ರಿ.ಪೂ. ಒಂದನೆಯ ಶತಮಾನದವನು ಎಂಬ ಒಂದು ವಿಚಾರಸರಣಿ, ಹಾಗೂ ಅವನು ಕ್ರಿ.ಶ. ಐದನೆಯ ಶತಮಾನದವನು ಎಂಬ ಇನ್ನೊಂದು ವಿಚಾರಸರಣಿ, ಇವೆರಡು ಮಾತ್ರ ಉಳಿಯುವವು. ಈ ಎರಡು ವಿಚಾರಸರಣಿಯವರೂ ಅವನು ವಿಕ್ರಮಾದಿತ್ಯನೆಂಬ ರಾಜನ ಆಸ್ಥಾನದಲ್ಲಿದ್ದ ನೆಂಬುದನ್ನೂ ಉಜ್ಜಯಿನಿಯಲ್ಲಿ ವಾಸವಾಗಿದ್ದನೆಂಬುದನ್ನೂ ಒಪ್ಪಿಕೊಳ್ಳುವರು. ಆದರೆ ಈ ವಿಕ್ರಮಾದಿತ್ಯನು ಸಂವತ್ಸರ ಸ್ಥಾಪಕನಾದ ವಿಕ್ರಮಾದಿತ್ಯನೇ ಅಥವಾ ಎರಡನೆಯ ಚಂದ್ರಗುಪ್ತನೇ ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯವನ್ನು ತಾಳುವರು.

೧. ಸಂವತ್ಸರ ಸ್ಥಾಪಕನಾದ ವಿಕ್ರಮಾದಿತ್ಯನು ಕ್ರಿ.ಪೂ. ೫೭ ರಲ್ಲಿ ವಿಕ್ರಮ ಸಂವತ್ಸರವನ್ನು ಸ್ಥಾಪಿಸಿದವನು. ಕಾಲಿದಾಸನು ಅವನ ಆಸ್ಥಾನದಲ್ಲಿದ್ದ ನವರತ್ನ ಗಳಲ್ಲಿ ಒಬ್ಬನೆಂಬ ಪ್ರತೀತಿಯಿದೆ. ಆದುದರಿಂದ ಅವನೂ ಕ್ರಿ.ಪೂ. ಒಂದನೆಯ ಶತಮಾನದವನು.

೨. ಮಾಲವಿಕಾಗ್ನಿಮಿತ್ರದ ಭರತವಾಕ್ಯದಲ್ಲಿ ಬರುವ **आशास्यते न खलु गोप्तरि नाग्निमित्रे** ಎಂಬ ವಾಕ್ಯದಿಂದ ಅಗ್ನಿಮಿತ್ರನೂ ಕಾಲಿದಾಸನೂ ಸಮಕಾಲೀನ ರೆಂದು ಭಾಸವಾಗುತ್ತದೆ. ಆದುದರಿಂದಲೂ ಕಾಲಿದಾಸನು ಕ್ರಿ.ಪೂ. ಒಂದನೆಯ ಶತಮಾನದವನೆಂದು ಹೇಳಬಹುದು.

೩. ಕ್ರಿ.ಶ. ಒಂದನೆಯ ಶತಮಾನದ ಅಶ್ವಘೋಷನ ಕೃತಿಯ ಮೇಲೆ ಕಾಲಿದಾಸನ ಪ್ರಭಾವವು ಸ್ಪಷ್ಟವಾಗಿ ಕಂಡುಬರುತ್ತದೆ.

೪. ಶಾಕುಂತಲದಲ್ಲಿ ಕಳವುಮಾಡಿದ್ದಕ್ಕೆ ಮರಣದಂಡನೆಯನ್ನು ಸೂಚಿಸಿರು ವದೂ ವಿಧವೆಗೆ ಪತಿಯ ಆಸ್ತಿಯ ಅಧಿಕಾರವಿಲ್ಲವೆಂದು ನಿರ್ದೇಶಿಸಿರುವದೂ ಕಾಲಿದಾಸನು ಸ್ಮೃತಿಕಾರನಾದ ಬೃಹಸ್ಪತಿಗಿಂತ ಮೊದಲು ಇದ್ದನೆಂದು ಸೂಚಿಸು ತ್ತವೆ. ಬೃಹಸ್ಪತಿಯ ಕಾಲ ಕ್ರಿ.ಶ. ಒಂದನೆಯ ಶತಮಾನ. ಆದುದರಿಂದ ಕಾಲಿದಾಸನು ಕ್ರಿ.ಪೂ. ಒಂದನೆಯ ಶತಮಾನದಲ್ಲಿದ್ದನೆಂದು ಅನೇಕ ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಆದರೆ ಇನ್ನು ಕೆಲವು ವಿದ್ವಾಂಸರು

೧. ಕಾಲಿದಾಸನ ರಘುವಂಶದಲ್ಲಿ ರಘುರಾಜನು ವಂಕ್ಷು ನದಿಯಮೇಲೆ ಹೂಣರನ್ನು ಜಯಿಸಿದ ಉಲ್ಲೇಖವಿದೆ. ಹೂಣರು ಕ್ರಿ.ಶ. ೪೫೦ ಸುಮಾರಿಗೆ ವಂಕ್ಷು (Oxus) ನದಿಯಮೇಲೆ ನೆಲೆಸಿದ್ದರು. ಆದುದರಿಂದ ಕಾಲಿದಾಸನು ಐದನೆಯ ಶತಮಾನದವನು.

೨. ಎರಡನೆಯ ಚಂದ್ರಗುಪ್ತನೂ ವಿಕ್ರಮಾದಿತ್ಯನೆಂಬ ಪದವಿಯನ್ನು ಧರಿಸಿದ್ದನು ಮತ್ತು ಉಜ್ಜಯಿನಿಯಲ್ಲಿ ಕೆಲದಿನ ರಾಜ್ಯವಾಳಿದನು. ಆದುದರಿಂದ ಕಾಲಿದಾಸನು ಅವನ ಆಸ್ಥಾನದಲ್ಲಿದ್ದನು.

೩. ಪ್ರುಶ್ನಷಸ್ವ ಗ್ರುಣ್ನ್ ಇತ್ಯಾದಿಯಾದ ಶಾಕುಂತಲದ ನಾಲ್ಕನೆಯ ಅಂಕ ದಲ್ಲಿಯ ಶ್ಲೋಕದಿಂದ ಕಾಲಿದಾಸನಿಗೆ ವಾತ್ಸ್ಯಾಯನನ ಕಾಮಸೂತ್ರದ ಪರಿಚಯವಿರುವದು ಸ್ಪಷ್ಟವಾಗುತ್ತದೆ. ಕಾಮಸೂತ್ರದ ಕಾಲ ಕ್ರಿ.ಶ. ೨೫೦.

೪. ಕ್ರಿ.ಶ. ೪೩೭ ರಲ್ಲಿ ಬರೆದ ವತ್ಸಭಟ್ಟಿಯ ಪ್ರಶಸ್ತಿಯಲ್ಲಿ ಕಾಲಿದಾಸನ ಶೈಲಿಯ ಹೋಲಿಕೆಯು ಸ್ಪಷ್ಟವಾಗಿದೆ.

ಈ ಎಲ್ಲ ಕಾರಣಗಳಿಂದ ಕಾಲಿದಾಸನು ಐದನೆಯ ಶತಮಾನದವನು ಎಂಬುದು ಈ ವಿದ್ವಾಂಸರ ಅಭಿಪ್ರಾಯ. ಈ ಎರಡೂ ಅಭಿಪ್ರಾಯಗಳೂ ಬಲವತ್ತರವಾಗಿರುವದರಿಂದ ವಿದ್ವಾಂಸರಲ್ಲಿ ಈವರೆಗೂ ಏಕಾಭಿಪ್ರಾಯ ವುಂಟಾಗಿಲ್ಲ.

ಭಾರವಿಯ ಕಾಲ ಕ್ರಿ.ಶ. ಆರನೆಯ ಶತಮಾನ. ಕ್ರಿ.ಶ. ೬೩೪ ರ ಐಹೊಳೆಯ ಶಾಸನದಲ್ಲಿ ಇವನ ಹೆಸರು ನಿರ್ದೇಶಿಸಲ್ಪಟ್ಟಿರುವದರಿಂದ ಇವನು ಅದಕ್ಕಿಂತ ಮೊದಲು ಇದ್ದನೆಂದು ತಿಳಿದುಬರುತ್ತದೆ. ಅವಂತಿಸುಂದರೀಕಥೆಯಲ್ಲಿ ಬಂದ ಒಂದು ಆಖ್ಯಾಯಿಕೆಯಿಂದ ಭಾರವಿಯು ಗಂಗರಾಜನಾದ ದುರ್ವಿನೀತನ ಆಸ್ಥಾನಕವಿಯಾಗಿದ್ದನೆಂದೂ ಚಾಲುಕ್ಯರಾಜನಾದ ವಿಷ್ಣುವರ್ಧನ ಮತ್ತು ಕಂಚಿಯ ಪಲ್ಲವರಾಜನಾದ ಸಿಂಹವಿಷ್ಣು ಇವರಿಬ್ಬರಿಂದಲೂ ಗೌರವಿಸಲ್ಪಡು ತ್ತಿದ್ದನೆಂದೂ ತಿಳಿದುಬರುತ್ತದೆ. ಇವರೆಲ್ಲರೂ ಆರನೆಯ ಶತಮಾನದವರು. ಭಾರವಿಯ ಮೊದಲಿನ ಹೆಸರು ದಾಮೋದರ. ಇವನು ತನ್ನ ಮಹಾಕಾವ್ಯದಿಂದ ಸೂರ್ಯನಷ್ಟು ಪ್ರಕಾಶಮಾನನಾದನೆಂಬ ಹೊಗಳಿಕೆಯಿಂದ ಇವನಿಗೆ ಭಾರವಿ ಯೆಂಬ ಹೆಸರು ಬಂದಿತು. ಇವನು 'ಕಿರಾತಾರ್ಜುನೀಯ'ವೆಂಬ ಒಂದೇ ಮಹಾಕಾವ್ಯವನ್ನು ಬರೆದಿದ್ದಾನೆ.

ಕುಮಾರದಾಸನು ಕ್ರಿ.ಶ. ಏಳನೆಯ ಶತಕದ ಉತ್ತರಾರ್ಧದಲ್ಲಿ ಆಗಿ ಹೋದನು. ಕ್ರಿ.ಶ. ೬೫೦ ರಲ್ಲಿ ಬರೆಯಲ್ಪಟ್ಟ 'ಕಾಶಿಕಾವೃತ್ತಿ' ಎಂಬ ವ್ಯಾಕರಣ ಗ್ರಂಥದ ಪರಿಚಯವು ಇವನಿಗಿದ್ದುದು ಇವನ ಕೆಲವು ಪ್ರಯೋಗಗಳಿಂದ ಸ್ಪಷ್ಟ ವಾಗುತ್ತದೆ. ಎಂಟನೆಯ ಶತಕದ ವಾಮನನು ತನ್ನ ಕಾವ್ಯಾಲಂಕಾರಸೂತ್ರದಲ್ಲಿ ಕುಮಾರದಾಸನ ಒಂದು ಶ್ಲೋಕವನ್ನು ಉಲ್ಲೇಖಿಸಿ ಅದರಲ್ಲಿ 'ಖಲು' ಎಂಬ ಅವ್ಯಯವನ್ನು ಶ್ಲೋಕದ ಆರಂಭದಲ್ಲಿಯೇ ಉಪಯೋಗಿಸಿದ್ದನ್ನು ಟೀಕಿಸಿರುವದ ರಿಂದ ಇವನು ಈ ಎರಡು ಕಾಲಾವಧಿಯ ಮಧ್ಯದಲ್ಲಿ ಅಂದರೆ ಕ್ರಿ.ಶ. ಏಳನೆಯ ಶತಕದ ಉತ್ತರಾರ್ಧದಲ್ಲಿ ಇದ್ದನೆಂದು ಊಹಿಸಬಹುದು. ಮಾಘಕವಿಯು ಒಂದು

ಶ್ಲೋಕವು ಇವನ ಒಂದು ಶ್ಲೋಕವನ್ನು ಹೋಲುವದರಿಂದ ಇವನು 'ಮಾಘನಿ'ಗಿಂತ ಮೊದಲಿನವನೆಂದು ಸ್ಪಷ್ಟವಾಗುತ್ತದೆ.

'ಪೂಜಾವಳಿ'ಯೆಂಬ ಸಿಂಹಳದ ಗ್ರಂಥದಲ್ಲಿ ಕುಮಾರದಾಸನೆಂಬ ರಾಜನು ಕ್ರಿ. ಶ. ಆರನೆಯ ಶತಕದ ಮಧ್ಯದಲ್ಲಿ ಸಿಂಹಳವನ್ನು ಆಳುತ್ತಿದ್ದನೆಂದೂ ಇವನಿಗೂ ಕಾಲಿದಾಸನಿಗೂ ಮೈತ್ರಿಯಿದ್ದಿತೆಂದೂ ಹೇಳಿದೆ. ಆದರೆ ಇದಕ್ಕೆ ಬೇರೆ ಐತಿಹಾಸಿಕ ಆಧಾರಗಳಿಲ್ಲ. ಕವಿ ಕುಮಾರದಾಸನಿಗೂ ರಾಜ ಕುಮಾರದಾಸನಿಗೂ ಯಾವ ಸಂಬಂಧವೂ ತೋರುವದಿಲ್ಲ.

ಮಾಘನು ತಾನು ದತ್ತಕನ ಮಗನೆಂದೂ ಸುಪ್ರಭದೇವನ ಮೊಮ್ಮಗನೆಂದೂ, ಸುಪ್ರಭದೇವನು ವರ್ಮಲಾಟನ ಮಂತ್ರಿಯಾಗಿದ್ದನೆಂದೂ ತನ್ನ ಗ್ರಂಥದಲ್ಲಿ ಹೇಳಿದ್ದಾನೆ. ಕ್ರಿ.ಶ. ೬೨೫ರ ವರ್ಮಲಾಟನ ಶಾಸನವೊಂದು ಉಪಲಬ್ಧವಾಗಿದೆ. ಮಾಘನು ಭಾರವಿಯನ್ನು ಅನುಕರಿಸುತ್ತಾನೆ ಮತ್ತು ಅವನನ್ನು ಮೀರಿಸಲು ಪ್ರಯತ್ನಿಸುತ್ತಾನೆ. ಶ್ರೀಹರ್ಷನ ನಾಗಾನಂದವನ್ನು ಉಲ್ಲೇಖಿಸುತ್ತಾನೆ. ಆದುದರಿಂದ ಇವನು ಏಳನೆಯ ಶತಕದ ಉತ್ತರಾರ್ಧದಲ್ಲಿ ಇದ್ದನೆಂದು ವಿದ್ವಾಂಸರು ನಿರ್ಣಯಿಸಿದ್ದಾರೆ. ಇವನು 'ಶಿಶುಪಾಲವಧ'ವೆಂಬ ಒಂದೇ ಮಹಾಕಾವ್ಯವನ್ನು ಬರೆದಿದ್ದಾನೆ.

'ಮಧುರಾವಿಜಯ' ಅಥವಾ 'ವೀರಕಂಪಣರಾಯಚರಿತ'ವೆಂಬ ಕಾವ್ಯವನ್ನು ಬರೆದ ಗಂಗಾದೇವಿಯು ವಿಜಯನಗರದ ರಾಜನಾದ ಬುಕ್ಕರಾಯನ ಸೊಸೆ. ಹಿರಿಯ ಕಂಪಣನ ಹೆಂಡತಿ. ಈ ಕಾವ್ಯದಲ್ಲಿ ಉಲ್ಲೇಖಿಸಿದ ಘಟನೆಗಳು ಕ್ರಿ.ಶ. ೧೩೬೦ ರಿಂದ ೧೩೭೧ ರ ಕಾಲಾವಧಿಯಲ್ಲಿ ನಡೆದ ಘಟನೆಗಳಾಗಿವೆ. ಆದುದರಿಂದ ಇವಳ ಕಾಲ ಕ್ರಿ.ಶ. ೧೪ನೆಯ ಶತಕ. ಈ ಕಾವ್ಯವು ಚಾರಿತ್ರಿಕ ದೃಷ್ಟಿಯಿಂದಲೂ ಕಾವ್ಯಗುಣಗಳ ದೃಷ್ಟಿಯಿಂದಲೂ ಉಪಯುಕ್ತವಾಗಿದೆ.

೭

'ಶಿಲಾಪುತ್ರಿಕಾ ವಾಸವದತ್ತಾ' ಮತ್ತು 'ಚಂದ್ರಾಪೀಡಸ್ಯ ವಿದ್ಯಾಭ್ಯಾಸಃ' ಈ ಎರಡು ಗದ್ಯಪಾಠಗಳನ್ನು ಸುಬಂಧುವಿನ 'ವಾಸವದತ್ತಾ' ಮತ್ತು ಬಾಣಭಟ್ಟನ 'ಕಾದಂಬರೀ' ಎಂಬ ಗದ್ಯಕಾವ್ಯಗಳಿಂದ ಆಯ್ದುಕೊಳ್ಳಲಾಗಿದೆ. ಸಂಸ್ಕೃತದಲ್ಲಿ ಗದ್ಯಕಾವ್ಯಗಳ ಸಂಖ್ಯೆ ತುಂಬ ಕಡಿಮೆ. ಆದರೆ ಇದ್ದ ಕೆಲವೇ ಗದ್ಯಕಾವ್ಯಗಳು ಬಹುಮುಖ ಪ್ರತಿಭೆಯ ಶ್ರೇಷ್ಠ ನಿದರ್ಶನಗಳಾಗಿವೆ. ಸಂಸ್ಕೃತ ಗದ್ಯಗಳು ಸುಲಭಶೈಲಿಯಲ್ಲಿ ಚಿಕ್ಕ ಚಿಕ್ಕ ವಾಕ್ಯಗಳುಳ್ಳವುಗಳಾಗಿ ಇರುವದಿಲ್ಲ. ಅಲ್ಲಲ್ಲಿ ಇಂಥ ಭಾಗಗಳು ಬಂದರೂ ಗದ್ಯದ ಸಾಮಾನ್ಯಶೈಲಿಯು ಸಮಾಸಭೂಯಿಷ್ಠವಾಗಿಯೂ ಉದ್ದುದ್ದ ವಾಕ್ಯಗಳುಳ್ಳದ್ದೂ ಶ್ಲೇಷಾರ್ಥ ಮತ್ತು ಕ್ಲಿಷ್ಟಪ್ರಯೋಗಗಳುಳ್ಳದ್ದೂ ಇರುತ್ತದೆ. ವಿಷಯ ನಿರೂಪಣೆಯೂ ಕಥನ

ಪ್ರಧಾನವಾಗಿರುವದಿಲ್ಲ. ವರ್ಣನಪ್ರಧಾನವಾಗಿರುತ್ತದೆ. ವಾಸ್ತವತೆಯ ಚಿತ್ರಣವಿರುವ ಸಂದರ್ಭಗಳ ಜೊತೆಗೆ ಅದ್ಭುತ ರಮ್ಯತೆಯ ಚಿತ್ರಣವಿರುವ ಸಂದರ್ಭಗಳೂ ಇರುತ್ತವೆ. ಛಂದೋಬದ್ಧವಾದ ಕಾವ್ಯಗಳಲ್ಲಿರುವಂತೆ ಪ್ರಾಸ, ಅಲಂಕಾರ, ರಸ, ಭಾವ ಇತ್ಯಾದಿಗಳಿರುತ್ತವೆ. ಛಂದಸ್ಸಿಲ್ಲದೆಯೇ ಈ ಗದ್ಯಗಳಿಗೊಂದು ಗೀತದ ಗತಿಯಿರುತ್ತದೆ. ಆದುದರಿಂದ ಛಂದಸ್ಸಿನ ನಿರ್ಬಂಧವಿಲ್ಲದಿದ್ದರೂ ಈ ಉನ್ನತಮಟ್ಟದ ಗದ್ಯವನ್ನು ಬರೆಯಲು ಹೆಚ್ಚಿನ ಯೋಗ್ಯತೆ ಬೇಕು. ಈ ಅಭಿಪ್ರಾಯದಿಂದಲೇ 'गद्यं कवीनां निकषं वदन्ति' ಎಂಬ ವಿಮರ್ಶಕರ ಉಕ್ತಿಯು ಬಳಕೆಯಲ್ಲಿದೆ.

ಇಂಥ ಗದ್ಯಕಾವ್ಯಗಳಲ್ಲಿ ಸುಬಂಧುವಿನ 'ವಾಸವದತ್ತಾ' ಗದ್ಯಕಾವ್ಯವು ಒಂದು ಉತ್ತಮ ಗದ್ಯಕಾವ್ಯವು. ಸುಬಂಧುವು ಕ್ರಿ. ಶ. ಆರನೆಯ ಶತಮಾನದ ಉದ್ಯೋತಕರನೆಂಬ ನೈಯಾಯಿಕನನ್ನು ಉಲ್ಲೇಖಿಸುವನು. ಇದೇ ಶತಕದ ಧರ್ಮಕೀರ್ತಿಯೆಂಬ ಬೌದ್ಧವಿದ್ವಾಂಸನ ಗ್ರಂಥವನ್ನೂ ಉಲ್ಲೇಖಿಸುವನು. ಕ್ರಿ. ಶ. ಎಂಟನೆಯ ಶತಮಾನದ ವಾಮನನು ಸುಬಂಧುವಿನ ಕೃತಿಯಿಂದ ಉದಾಹರಿಸುವನು. ಆದುದರಿಂದ ಸುಬಂಧುವು ಏಳನೆಯ ಶತಕದಲ್ಲಿದ್ದನೆಂದು ಊಹಿಸಬಹುದು. ಬಾಣಭಟ್ಟನು ಇವನ ಕೃತಿಯನ್ನು ಹೊಗಳುವದರಿಂದ ಇವನು ಅವನಿಗಿಂತ ಮೊದಲಿಗನು. ಇವನು ಶ್ರೀಶೈಲದ ಮಲ್ಲಿಕಾರ್ಜುನನನ್ನು ನಿರ್ದೇಶಿಸುವದರಿಂದ ದಾಕ್ಷಿಣಾತ್ಯನಿರಬಹುದು. 'ತುಂಗಭದ್ರಾ' ನದಿಯ ಹೆಸರನ್ನೂ ಶ್ಲೇಷದಿಂದ ಉಲ್ಲೇಖಿಸುವನು.

ಕಂದರ್ಪಕೇತು ಎಂಬ ರಾಜಕುಮಾರ ಮತ್ತು ವಾಸವದತ್ತೆಯೆಂಬ ರಾಜಕುಮಾರಿ ತಮ್ಮ ತಮ್ಮ ಕನಸುಗಳಲ್ಲಿ ಪರಸ್ಪರರನ್ನು ನೋಡಿ ಅನುರಾಗವನ್ನು ತಾಳುವರು. ಕಂದರ್ಪಕೇತುವು ವಾಸವದತ್ತೆಯ ಅರಗಿಳಿಯು ತಂದ ಪ್ರೇಮಪತ್ರವನ್ನೋದಿ ಅವಳ ಊರಿಗೆ ಹೋಗಿ 'ಮನೋಜವ'ವೆಂಬ ಕುದುರೆಯಮೇಲೆ ಅವಳೊಡನೆ ಆ ಊರಿನಿಂದ ಹೊರಬಿದ್ದು ಅರಣ್ಯವನ್ನು ಸೇರುವನು. ಅಲ್ಲಿ ಅವರು ಪರಸ್ಪರರನ್ನು ಅಗಲುವರು. ಹೀಗೆ ಅಗಲಿದಮೇಲೆ ವಾಸವದತ್ತೆಗಾಗಿ ಕಿರಾತರು ಹೋರಾಡಿದ್ದು, ವಾಸವದತ್ತೆಯು ಶಿಲಾಮೂರ್ತಿಯಾದದ್ದು ಮತ್ತು ಕಂದರ್ಪಕೇತುವು ಅರಣ್ಯವನ್ನೆಲ್ಲ ಸುತ್ತಿ ಸಮುದ್ರತೀರಕ್ಕೆ ಬಂದು ಪ್ರಾಣವನ್ನು ಬಿಡಬೇಕೆನ್ನುವಷ್ಟರಲ್ಲಿ ಆಕಾಶವಾಣಿಯ ಸೂಚನೆಯಂತೆ ಮತ್ತೆ ಅರಣ್ಯದಲ್ಲಿ ಸಂಚರಿಸುತ್ತ ಶಿಲಾಮೂರ್ತಿಯಾದ ವಾಸವದತ್ತೆಯನ್ನು ಕಂಡು ಅಪ್ಪಿಕೊಂಡು ಅವಳನ್ನು ತಿರುಗಿ ಪಡೆದ ಕಥೆಯು ಇಲ್ಲಿ ಕೊಟ್ಟ ಪಾಠದಲ್ಲಿ ಬಂದಿದೆ. ಈ ಚಿಕ್ಕ ಭಾಗದಿಂದಲೇ ಸುಬಂಧುವಿನ ಶೈಲಿಯ ಮಾಧುರ್ಯವನ್ನೂ ವರ್ಣನೆಯ ಚಾತುರ್ಯವನ್ನೂ ತಿಳಿದುಕೊಳ್ಳಬಹುದು.

‘ ಚಂದ್ರಾಪೀಡಸ್ಯ ವಿದ್ಯಾಭ್ಯಾಸಃ ’ ಎಂಬ ಗದ್ಯಭಾಗವು ಬಾಣಭಟ್ಟನ ಕಾದಂಬರಿಯಿಂದ ಆಯ್ದುದು. ಈ ಚಿಕ್ಕ ಭಾಗದಲ್ಲಿ ತಾರಾಪೀಡನು ಚಂದ್ರಾಪೀಡನ ವಿದ್ಯಾಭ್ಯಾಸಕ್ಕಾಗಿ ಮಾಡಿದ ವಿಶೇಷ ವ್ಯವಸ್ಥೆ, ಅವನು ಸ್ವತಃ ಕಾಲಕಾಲಕ್ಕೆ ಹೋಗಿ ಮೇಲ್ವಿಚಾರಣೆಯನ್ನು ಮಾಡುವದು, ಚಂದ್ರಾಪೀಡನು ಕಲಿತ ಅನೇಕ ವಿದ್ಯೆ ಮತ್ತು ಕಲೆಗಳು ಸುಂದರವಾಗಿ ನಿರೂಪಿಸಲ್ಪಟ್ಟವೆ. ಕಾದಂಬರಿಯಲ್ಲಿ ಇನ್ನೂ ಅನೇಕ ಕಡೆಗೆ ಬಾಣಭಟ್ಟನು ಕೊಡುವ ಇಂಥ ವಿವರಗಳು ಅವನ ಕಾವ್ಯವು ನಮ್ಮ ಸಂಸ್ಕೃತಿಯ ಆಗರವೆಂಬುದನ್ನು ಸ್ಪಷ್ಟಪಡಿಸುತ್ತವೆ.

ಬಾಣಭಟ್ಟನ ದೇಶಕಾಲಾದಿಗಳ ವಿಷಯದಲ್ಲಿ ಯಾವ ಸಂದೇಹವೂ ಇಲ್ಲ. ಅವನು ಕ್ರಿ.ಶ. ೬೦೬ ರಿಂದ ೬೪೭ ರ ವರೆಗೆ ಆಳಿದ ಹರ್ಷವರ್ಧನನ ಆಸ್ಥಾನ ಕವಿಯಾಗಿದ್ದನು. ಅವನಿಂದ ಕನಕಕೋಟಿಶತದಿಂದ ಗೌರವಿಸಲ್ಪಟ್ಟದ್ದನು. ಇವನ ತಂದೆ ಚಿತ್ರಭಾನು,ತಾಯಿ ರಾಜದೇವಿ. ಹದಿನಾಲ್ಕು ವರುಷದವನಿದ್ದಾಗಲೇ ತಂದೆ-ತಾಯಿಗಳಿಬ್ಬರನ್ನೂ ಕಳೆದುಕೊಂಡನು. ಅನೇಕವರ್ಷ ದೇಶದಲ್ಲೆಲ್ಲ ಅಲೆದಾಡಿ, ನಟ-ವಿಟಾದಿಗಳ ಸ್ನೇಹಮಾಡಿ ಕೊನೆಗೆ ಹರ್ಷನ ಆಸ್ಥಾನವನ್ನು ಸೇರಿದನು. ಕಾದಂಬರೀ ಮತ್ತು ಹರ್ಷಚರಿತ ಇವೆರಡು ಇವನ ಗದ್ಯಕಾವ್ಯಗಳು. ಕಾದಂಬರಿಯ ಪೂರ್ವಾರ್ಧವನ್ನು ಮಾತ್ರ ಇವನು ಬರೆದಿರುವನು. ಉತ್ತರಾರ್ಧವನ್ನು ಇವನ ಮಗನಾದ ಭೂಷಣಭಟ್ಟನು ಬರೆದಿರುವನು.

೮

ಸಂಸ್ಕೃತದಲ್ಲಿ ಬರೆದ ಕೆಲವು ಶಾಸನಗಳು ಉತ್ತಮವಾದ ಗದ್ಯ-ಪದ್ಯಗಳಲ್ಲಿದ್ದು ಕಾವ್ಯಗುಣಗಳಿಂದ ಕೂಡಿವೆ. ಎರಡನೆಯ ಶತಮಾನದ ರುದ್ರದಾಮನನ್ನು ಹೊಗಳುವ ಗಿರಿನಾರ ಶಾಸನ, ನಾಲ್ಕನೆಯ ಶತಮಾನದ ಸಮುದ್ರಗುಪ್ತನನ್ನು ಹೊಗಳುವ ಹರಿಷೇಣನು ಬರೆದ ಶಾಸನ, ಐದನೆಯ ಶತಮಾನದ ವತ್ಸಭಟ್ಟಿಯ ಶಾಸನ, ಏಳನೆಯ ಶತಮಾನದ ಪೂರ್ವಾರ್ಧದ ಐಹೊಳೆ ಶಾಸನ ಇವು ಸಂಸ್ಕೃತ ಶಾಸನ ಸಾಹಿತ್ಯಕ್ಕೆ ಉತ್ತಮ ನಿದರ್ಶನಗಳಾಗಿವೆ. ಇವುಗಳಲ್ಲಿ ‘ ಸತ್ಯಾಶ್ರಯಃ ಪುಲಿಕೇಶೀ ’ ಎಂಬ ಪಾಠದಲ್ಲಿ ಐಹೊಳೆಯ ಶಾಸನವನ್ನು ಕೊಡಲಾಗಿದೆ. ಇದನ್ನು ಬರೆದವನು ರವಿಕೀರ್ತಿಯು. ಇದರ ಕಾಲವು ಕ್ರಿ.ಶ. ೬೩೪-೬೩೫ (ಶಕ ೫೫೬) ಇದರಲ್ಲಿ ಕಾಲಿದಾಸ ಮತ್ತು ಭಾರವಿಯ ಉಲ್ಲೇಖವಿರುವದು ಇದರ ವೈಶಿಷ್ಟ್ಯ. ಇದರಲ್ಲಿ ಬನವಾಸಿಯ ಕದಂಬರು, ಗಂಗರು, ಆಲುಪರು, ಕೊಂಕಣಕ್ಕೆ ಬಂದ ಮೌರ್ಯರು, ಲಾಟ ಮಾಲವ ಮತ್ತು ಗುರ್ಜರ ದೇಶದ ರಾಜರು, ಮಹಾರಾಷ್ಟ್ರ ಕೋಸಲ ಮತ್ತು ಕಲಿಂಗದ ರಾಜರು,

ಕಾಂಚಿಯ ಪಲ್ಲವರು, ಚೋಳ ಕೇರಳ ಮತ್ತು ಪಾಂಡ್ಯರಾಜರು ಇವರೆಲ್ಲರ ಉಲ್ಲೇಖವಿದೆ. ಇವರಲ್ಲಿ ಕೆಲವರು ಸಮಕಾಲೀನ ರಾಜರು. ಇನ್ನು ಕೆಲವರು ಆಯಾ ಪ್ರದೇಶಗಳಲ್ಲಿ ಪ್ರಸಿದ್ಧವಾದ ರಾಜಮನೆತನಗಳು. ಪುಲಕೇಶಿಯ ಸಮಕಾಲೀನನಾದ ಮತ್ತು ಅವನ ಪರಾಕ್ರಮದಿಂದ ತಡೆಯಲ್ಪಟ್ಟ ಹರ್ಷವರ್ಧನನ ನಿರ್ದೇಶವಿರುವದು ಈ ಶಾಸನದ ಇನ್ನೊಂದು ವೈಶಿಷ್ಟ್ಯ. ಶಾಸನವನ್ನು ಬರೆದ ಕವಿ ರವಿಕೀರ್ತಿಯು ತನ್ನ ಹೆಸರನ್ನೂ ಶಾಸನವನ್ನು ಬರೆದ ಕಾಲವನ್ನೂ ಬರೆದ ಸಂದರ್ಭವನ್ನೂ ಉಲ್ಲೇಖಿಸಿರುವನು. ಭಾಷೆಯು ಪ್ರೌಢವಾಗಿಯೂ ಸುಂದರ ವಾಗಿಯೂ ಇದೆ. ಪ್ರಾಸ, ಅಲಂಕಾರ, ಸಮಸ್ತಪದಗಳ ಸೊಗಸಾದ ಗತಿ ಮೊದಲಾದವುಗಳು ಈ ಶಾಸನವನ್ನು ಉತ್ತಮ ಕಾವ್ಯವನ್ನಾಗಿ ಮಾಡಿವೆ.

೬

'ರಾಮಸ್ಯ ಪಟ್ಟಾಭಿಷೇಕಾಯ ದಶರಥಃ ಮತಿಂ ಕರೋತಿ' ಮತ್ತು 'ವಿಶ್ವಗುಣಾದರ್ಶೇ ಗುಣದೋಷದೃಷ್ಟೀ' ಎಂಬ ಎರಡು ಪಾಠಗಳನ್ನು ಚಂಪೂ ಕಾವ್ಯಗಳಿಂದ ಆಯ್ದುಕೊಳ್ಳಲಾಗಿದೆ. 'गद्यपद्यमयी काचित् चम्पूरित्यभिधीयते' ಎಂದು ದಂಡಿಯು ತನ್ನ 'ಕಾವ್ಯಾದರ್ಶ'ದಲ್ಲಿ ಚಂಪೂಕಾವ್ಯದ ಲಕ್ಷಣವನ್ನು ಹೇಳಿದ್ದಾನೆ. ಚಂಪೂ ಶೈಲಿಯನ್ನು ಹೋಲುವ ಗದ್ಯಪದ್ಯಮಿಶ್ರಿತವಾದ ಕೆಲವು ಸಂಸ್ಕೃತ ಶಾಸನಗಳಿದ್ದರೂ ದಂಡಿಗಿಂತ ಮೊದಲು ಬರೆದ ಚಂಪೂಕಾವ್ಯಗಳು ಯಾವವೂ ಉಪಲಬ್ಧವಾಗಿಲ್ಲ. ಆದರೂ ದಂಡಿಯು ಚಂಪೂಕಾವ್ಯದ ಲಕ್ಷಣ ವನ್ನು ಹೇಳಿರುವದರಿಂದ ಈ ಶೈಲಿ ಮತ್ತು ಇಂಥ ಕಾವ್ಯಪ್ರಕಾರಗಳು ಅವನಿಗಿಂತ ಮೊದಲು ಬಳಕೆಯಲ್ಲಿದ್ದವೆಂದು ಊಹಿಸಬಹುದು. ಉಪಲಬ್ಧವಿದ್ದ ಚಂಪೂಕಾವ್ಯ ಗಳಲ್ಲಿ ರಾಷ್ಟ್ರಕೂಟರಾಜನಾದ ಮೂರನೆಯ ಇಂದ್ರನ ಆಸ್ಥಾನದಲ್ಲಿದ್ದ ತ್ರಿವಿಕ್ರಮ ಭಟ್ಟನ ನಲಚಂಪೂಕಾವ್ಯವೇ ಪ್ರಾಚೀನವಾದುದು. ಇದು ಹತ್ತನೆಯ ಶತಕದ ಪೂರ್ವಾರ್ಧದಲ್ಲಿ ಬರೆಯಲ್ಪಟ್ಟಿದೆ. 'ಚಂಪೂ' ಶಬ್ದವು ಗತ್ಯರ್ಥಕ 'ಚಪ್' ಅಥವಾ 'ಚಂಪ್' ಧಾತುವಿನ ರೂಪವಾಗಿದೆ. ಇದು ಗದ್ಯ ಪದ್ಯಮಿಶ್ರಿತವಾದ ಶೈಲಿಯ ಬಂಧುರವಾದ ಗತಿಯನ್ನು ಸೂಚಿಸುತ್ತದೆ.

'ರಾಮಸ್ಯ ಪಟ್ಟಾಭಿಷೇಕಾಯ ದಶರಥಃ ಮತಿಂ ಕರೋತಿ' ಎಂಬ ಭಾಗ ವನ್ನು ವಿದರ್ಭರಾಜನು ಬರೆದ 'ಚಂಪೂರಾಮಾಯಣ'ದ ಅಯೋಧ್ಯಾಕಾಂಡದ ಆರಂಭದ ಭಾಗದಿಂದ ಆಯ್ದುಕೊಳ್ಳಲಾಗಿದೆ. ವಿದರ್ಭರಾಜನು ಸುಂದರಕಾಂಡದ ವರೆಗೆ ಮಾತ್ರ ಬರೆದಿರುವನು. ಯುದ್ಧಕಾಂಡವನ್ನು ಲಕ್ಷ್ಮಣನೆಂಬುವನು ಬರೆದಿರುವನು. ಉತ್ತರಕಾಂಡಗಳನ್ನು ಇಬ್ಬರು ಮೂವರು ಬರೆದಿರುವರು.

ಸುಂದರಕಾಂಡದವರೆಗಿನ ಭಾಗವನ್ನು ಬರೆದವನು ವಿದರ್ಭರಾಜನೆಂಬುದು ಕಾಂಡ ಸಮಾಪ್ತಿಯ ನಂತರ ಬರುವ ಗ್ರಂಥಕರ್ತನನ್ನು ನಿರ್ದೇಶಿಸುವ ವಾಕ್ಯದಲ್ಲಿ ಬರುವದು. ಆದರೆ ಲಕ್ಷ್ಮಣನು ತನ್ನ ಯುದ್ಧಕಾಂಡದ ಆರಂಭದಲ್ಲಿ ಹಿಂದಿನ ಕಾಂಡಗಳು ಭೋಜರಾಜ ವಿರಚಿತವೆಂದು ಹೇಳುವನು. ಭೋಜರಾಜನು ಮಾಲವದ ರಾಜನು. ಆದ್ದರಿಂದ ಈ ವಿದರ್ಭರಾಜನು ಭೋಜರಾಜನೇ ಅಲ್ಲವೇ ಎಂಬುದು ಸಂದಿಗ್ಧವಾಗಿದೆ. ಭೋಜರಾಜನ ಕಾಲ ಕ್ರಿ.ಶ. ೧೦೧೮-೬೩.

ಚಂಪೂರಾಮಾಯಣದ ಶೈಲಿಯು ಸರಸವಾಗಿದೆ. ಗದ್ಯ ಮತ್ತು ಪದ್ಯ ಎರಡರ ಮಾಧುರ್ಯವನ್ನೂ ಪ್ರೌಢಿಮೆಯನ್ನೂ ಪಡೆದಿದೆ.

गद्यानुबन्धरसमिश्रितपद्यसूक्तिः ।
हृद्या हि वाद्यकलया कलितेव गीतिः ॥

ಗದ್ಯಮಿಶ್ರಿತವಾದ ಪದ್ಯವು ವಾದ್ಯಮಿಶ್ರಿತವಾದ ಗಾನದ ಮಧುರ್ಯದಂತೆ ಆಹ್ಲಾದಕರವಾದುದು ಎಂದು ಅವನೇ ಹೇಳುತ್ತಾನೆ. ಇಲ್ಲಿ ಕೊಟ್ಟ ಭಾಗದಲ್ಲಿ ದಶರಥನು ಶ್ರೀರಾಮನಿಗೆ ಪಟ್ಟಾಭಿಷೇಕವನ್ನು ಮಾಡಬೇಕೆಂದು ಆಲೋಚಿಸಿದ್ದು, ಈ ಸಮಾಚಾರವನ್ನು ತಿಳಿದು ಪ್ರಜೆಗಳಿಗಾದ ಸಂತೋಷ ಸುಂದರವಾಗಿ ವರ್ಣಿಸಲ್ಪಟ್ಟವೆ.

'ವಿಶ್ವಗುಣಾದರ್ಶೇ ಗುಣದೋಷದೃಷ್ಟೀ' ಎಂಬ ಭಾಗವನ್ನು ಕ್ರಿ.ಶ. ೧೭ನೆಯ ಶತಕದ ವೆಂಕಟಾಧ್ವರಿಯು ಬರೆದ ವಿಶ್ವಗುಣಾದರ್ಶ ಚಂಪೂಕಾವ್ಯದಿಂದ ಆಯ್ದುಕೊಳ್ಳಲಾಗಿದೆ. ಈ ಚಂಪೂಕಾವ್ಯವು ವಿಷಯನಿರೂಪಣೆಯಲ್ಲಿ ಹೊಸದೊಂದು ಕ್ರಮವನ್ನು ಅನುಸರಿಸುತ್ತದೆ. ಗುಣಗ್ರಾಹಿಸ್ವಭಾವದ ವಿಶ್ವಾವಸು ಮತ್ತು ದೋಷೈಕದೃಷ್ಟಿಯುವನಾದ ಕೃಶಾನು ಎಂಬ ಇಬ್ಬರು ಗಂಧರ್ವರು ವಿಮಾನದಲ್ಲಿ ಸಂಚರಿಸುತ್ತ ಭಾರತವರ್ಷವನ್ನೆಲ್ಲ ನೋಡಿ ಆಯಾ ಪ್ರದೇಶಗಳ ಜನರ ಗುಣದೋಷಗಳನ್ನು ವರ್ಣಿಸುವರು. ದಕ್ಷಿಣ ಭಾರತದ ಆಂಧ್ರ, ಕರ್ನಾಟಕ, ಇತ್ಯಾದಿ ಪ್ರದೇಶಗಳ ವರ್ಣನೆ ವಿವರವಾಗಿ ಬರುತ್ತದೆ. ತಿರುಪತಿ, ಕಾಂಚಿ, ಮಧುರೆ, ಶ್ರೀರಂಗ ಇತ್ಯಾದಿ ಕ್ಷೇತ್ರಗಳ ವರ್ಣನೆಯಿದೆ. ಬೇರೆಬೇರೆ ಜಾತಿ ಮತಗಳವರ ಗುಣದೋಷ ವಿಮರ್ಶೆಯಿದೆ. ಕವಿಗಳು, ತಾರ್ಕಿಕರು, ವೇದಾಂತಿಗಳು, ವೈದ್ಯರು, ವೈದಿಕರು ಇತ್ಯಾದಿಗಳ ಗುಣದೋಷ ವಿಮರ್ಶೆಯಿದೆ. ಹೀಗೆ ಈ ಕಾವ್ಯವು ಕಟುವಿಮರ್ಶೆ ಮತ್ತು ಗುಣಾವಿಷ್ಕರಣ ಎರಡನ್ನೂ ಒಳಗೊಂಡಿದೆ. ಅಲ್ಲಲ್ಲಿ ಕಟುಹಾಸ್ಯವಿದೆ. ಇಲ್ಲಿ ಕೊಟ್ಟ ಪಾಠದಲ್ಲಿ ಸೂರ್ಯನ ವರ್ಣನೆ ಮತ್ತು ಜ್ಯೋತಿಷಿಗಳ ಗುಣದೋಷ ವಿಮರ್ಶೆಯಿದೆ.

'ಯಕ್ಷಸಂದೇಶಃ' ಎಂಬ ಪಾಠವನ್ನು ಮಹಾಕವಿ ಕಾಲಿದಾಸನ ಮೇಘಸಂದೇಶದ ಕೊನೆಯ ಭಾಗದಿಂದ ಆಯ್ದುಕೊಳ್ಳಲಾಗಿದೆ. ಈ ಕಾವ್ಯವು ಮುಂದೆ

ಬಂದ ಎಲ್ಲ ಸಂಸ್ಕೃತ ಭಾವಗೀತಗಳಿಗೂ ಸಂದೇಶಕಾವ್ಯಗಳಿಗೂ ಮಾದರಿಯಾಗಿದೆ. ರಾಮಾಯಣದಲ್ಲಿಯ ಹನುಮತ್-ಸಂದೇಶ, ಹಾಗೂ ಮಹಾಭಾರತದಲ್ಲಿಯ ನಲೋಪಾಖ್ಯಾನದಲ್ಲಿ ಬಂದ ದಮಯಂತಿಯು ಕಳಿಸಿದ ಸಂದೇಶಗಳಿಂದ ಕವಿಯು ಸ್ಫೂರ್ತಿಯನ್ನು ಪಡೆದಿರಬಹುದಾದರೂ ಈ ಕಾವ್ಯದ ವಸ್ತುವಿನ್ಯಾಸದಲ್ಲಿ ಕವಿಯು ಅಪೂರ್ವವಾದ ಚಾತುರ್ಯವನ್ನೂ ಪ್ರತಿಭೆಯನ್ನೂ ವ್ಯಕ್ತಪಡಿಸಿದ್ದಾನೆ. ಕುಬೇರನ ಶಾಪದಿಂದ ಒಂದು ವರ್ಷ ಪ್ರಿಯತಮೆಯನ್ನು ಅಗಲಿ ಇರಬೇಕಾಗಿ ಬಂದ ಯಕ್ಷನು ಮಳೆಗಾಲವು ಆರಂಭವಾಗಲು ವಿರಹಕಾತರನಾಗಿ ಮೇಘವು ಜಡಪದಾರ್ಥವು ಎಂಬುದನ್ನೂ ಅರಿಯದೆ ಅದರೊಡನೆ ಸಂದೇಶವನ್ನು ಕಳಿಸಲು ಅಪೇಕ್ಷಿಸಿದನೆಂಬ ಅಪೂರ್ವವಾದ ಕಲ್ಪನೆಯಿದೆ. ಅವನು ಏನು ಸಂದೇಶವನ್ನು ಕಳಿಸುವನೋ ಎಂಬುದನ್ನು ತಿಳಿದುಕೊಳ್ಳಬೇಕೆಂಬ ಕುತೂಹಲವಿರುವ ವಾಚಕರಿಗೆ ಅರಿಯದಂತೆಯೇ ಮೇಘವು ಕ್ರಮಿಸಬೇಕಾದ ಮಾರ್ಗದ ನಿಸರ್ಗರಮಣೀಯವಾದ ವರ್ಣನೆ ಮುಂದುವರೆಯುತ್ತದೆ. ಸಂದೇಶದ ವಿಷಯವನ್ನೇ ಮರೆತು ಹೊಲಗಳು, ಬೆಟ್ಟಗಳು, ನದಿಗಳು, ಸಾರಂಗಗಳು, ನಾನಾ ಪ್ರದೇಶಗಳು, ನಗರಗಳು, ದೇವಾಲಯಗಳು ಹೀಗೆ ಕವಿಯು ಕರೆದುಕೊಂಡು ಹೋದ ಮಾರ್ಗದಲ್ಲಿ ಮುಂದುವರೆದು ಅಲಕಾನಗರಿಯನ್ನು ನಮ್ಮ ಮನಶ್ಚಕ್ಷುವಿನಿಂದ ತಲಪುತ್ತೇವೆ. ಅಲಕಾನಗರಿಯ ಸೌಂದರ್ಯವನ್ನೂ ಯಕ್ಷನ ಮನೆಯ ಸೌಂದರ್ಯವನ್ನೂ ಸವಿದು ಯಕ್ಷನ ಪತ್ನಿಯ ವಿರಹಾವಸ್ಥೆಯನ್ನು ಕಂಡು ಮರುಗುತ್ತೇವೆ. ಹೀಗೆ ಕಾವ್ಯದ ಕೊನೆಯನ್ನು ಮುಟ್ಟುವ ವರೆಗೆ ಸಂದೇಶವನ್ನು ಹೇಳಲು ಹಿನ್ನೆಲೆಯನ್ನು ಪರಿಪಕ್ವಗೊಳಿಸಿ ಕೊನೆಗೆ ಕವಿಯು 'ಸಂದೇಶ'ವನ್ನು ಹೇಳುತ್ತಾನೆ. ಕಾವ್ಯದ ತುಂಬೆಲ್ಲ ಮೂಡಿ ಬಂದ ನಿಸರ್ಗಸೌಂದರ್ಯ, ವಿಪ್ರಲಂಭ ಶೃಂಗಾರ ಪರಿಪೋಷ ಮತ್ತು ಯಕ್ಷನ ಪ್ರಿಯತಮೆಯ ಸೌಂದರ್ಯ ಈ ಮೂರು ಅಂಶಗಳೂ ಈ ಸಂದೇಶದ ಭಾಗದಲ್ಲಿ ಮತ್ತೊಮ್ಮೆ ಸ್ಫುಟವಾಗಿ ಮೂಡಿಬಂದಿವೆ. ಮೇಘ ಸಂದೇಶದಲ್ಲಿಯ ಲಲಿತವಾದ ಕಲ್ಪನೆಗಳು, ಮನೋಹರವಾದ ಶಬ್ದಚಿತ್ರಗಳು, ಉಕ್ಕಿಬರುವ ಭಾವೋದ್ರೇಕ, ವಿರಹಿಗಳ ಕನಸುಗಳು ಎಲ್ಲವೂ ಈ ಭಾಗದಲ್ಲಿ ಸುಂದರವಾಗಿ ಪ್ರತಿಫಲಿತವಾಗಿವೆ.

'ಸುಜನಪದ್ಧತಿಃ' ಎಂಬ ಪಾಠವನ್ನು ಭರ್ತೃಹರಿಯ ನೀತಿಶತಕದಿಂದ ಆಯ್ದುಕೊಳ್ಳಲಾಗಿದೆ. ಶೃಂಗಾರ, ನೀತಿ ಮತ್ತು ವೈರಾಗ್ಯಗಳೆಂಬ ಮೂರು ಶತಕಗಳನ್ನು ಬರೆದ ಭರ್ತೃಹರಿಯೂ 'ವಾಕ್ಯಪದೀಯ'ವೆಂಬ ವ್ಯಾಕರಣಗ್ರಂಥವನ್ನು ಬರೆದ ಭರ್ತೃಹರಿಯೂ ಒಬ್ಬನೇ ಎಂಬ ಅಭಿಪ್ರಾಯವನ್ನು ಒಪ್ಪಿಕೊಂಡರೆ ಇವನ ಕಾಲ ಏಳನೆಯ ಶತಮಾನ. ಈ ಭರ್ತೃಹರಿಯು ಕ್ರಿ. ಶ. ೬೫೧ರಲ್ಲಿ ದಿವಂಗತನಾದನೆಂದು ಇತ್ಸಿಂಗನು ಬರೆದಿದ್ದಾನೆ. ಇವನು ರಾಜನಾಗಿದ್ದ

ನೆಂದೂ ಗೃಹಸ್ಥಾಶ್ರಮದಿಂದ ಸನ್ಯಾಸಾಶ್ರಮಕ್ಕೂ ಸನ್ಯಾಸಾಶ್ರಮದಿಂದ ಗೃಹಸ್ಥಾಶ್ರಮಕ್ಕೂ ಏಳುಸಲ ಬದಲಾಯಿಸಿದನೆಂದೂ ಪ್ರತೀತಿಯಿದೆ.

ವಿವೇಕವನ್ನೂ ಚಾರಿತ್ರ್ಯವನ್ನೂ ಬೋಧಿಸುವ ನೀತಿಶ್ಲೋಕಗಳು ಸಂಸ್ಕೃತ ದಲ್ಲಿ ವಿಪುಲವಾಗಿವೆ. ಮಹಾಭಾರತ ರಾಮಾಯಣಗಳಲ್ಲಿಯೂ ರಾಜನೀತಿ ಗ್ರಂಥಗಳಲ್ಲಿಯೂ ಪಂಚತಂತ್ರ ಹಿತೋಪದೇಶಾದಿಗಳಲ್ಲಿಯೂ ಇಂಥ ನೀತಿ ಶ್ಲೋಕಗಳು ಬಿಡಿಯಾಗಿಯೂ ಸಂಕಲಿತವಾಗಿಯೂ ಬರುತ್ತವೆ. ಆದರೆ ಮನುಷ್ಯಸ್ವಭಾವವನ್ನು ಕ್ರಮಬದ್ಧವಾಗಿ ವಿಶ್ಲೇಷಿಸಿ, ಸುಂದರವಾದ ಉಪಮಾನ ಗಳನ್ನೂ ನಿದರ್ಶನಗಳನ್ನೂ ಕೊಟ್ಟು, ಮೂರ್ಖ, ವಿದ್ವಾನ್, ಸುಜನ, ದುರ್ಜನ, ಮಾನ, ಧೈರ್ಯ ಹೀಗೆ ಈ ಸ್ವಭಾವಚಿತ್ರಣವನ್ನು ವಿಂಗಡಿಸಿ, ವಿಸ್ತೃತವಾದ ವೃತ್ತಗಳಲ್ಲಿ ಶ್ಲೋಕಗಳನ್ನು ರಚಿಸಿ, ಮಾಡಿದ ನೀತಿಶ್ಲೋಕಗಳ ಸಂಕಲನಗಳಲ್ಲಿ ಭರ್ತೃಹರಿಯ ನೀತಿಶತಕವೇ ಶ್ರೇಷ್ಠವಾದುದು. ಈ ಶತಕದ ವಿಷಯ ಪ್ರತಿಪಾದನೆಯ ಕ್ರಮವನ್ನೂ ಉಪದೇಶದ ಆಳವನ್ನೂ ಪರಿಚಯಮಾಡಿಸಿ ಕೊಡುವ ದೃಷ್ಟಿಯಿಂದ 'ಸುಜನಪದ್ಧತಿ'ಯೆಂಬ ಒಂದು ಭಾಗವನ್ನು ಮಾತ್ರ ಇಲ್ಲಿ ಕೊಡಲಾಗಿದೆ.

೧೦

'ಅನ್ಯೋಕ್ತಯಃ' ಎಂಬ ಪಾಠವನ್ನು ಪಂಡಿತರಾಜ ಜಗನ್ನಾಥಪಂಡಿತನ ಭಾಮಿನೀವಿಲಾಸದ ಅನ್ಯೋಕ್ತಿವಿಲಾಸದಿಂದ ಆಯ್ದುಕೊಳ್ಳಲಾಗಿದೆ (ಈ ಭಾಗಕ್ಕೆ 'ಪ್ರಾಸ್ತಾವಿಕವಿಲಾಸ'ವೆಂದೂ ಕೆಲವು ಮುದ್ರಣಗಳಲ್ಲಿ ಶೀರ್ಷಿಕೆಯನ್ನು ಕೊಟ್ಟಿದ್ದಾರೆ). ಅನ್ಯೋಕ್ತಿಯೆಂದರೆ ಹೇಳಬೇಕೆಂದಿರುವದನ್ನು ಇನ್ನೊಂದರ ಮೂಲಕ ಸೂಚಿಸುವದು. ಯಾವುದರ ಗುಣದೋಷಗಳನ್ನು ವರ್ಣಿಸ ಬೇಕಾಗಿದೆಯೋ ಅದನ್ನು ಪ್ರತ್ಯಕ್ಷವಾಗಿ ನಿರ್ದೇಶಿಸದೆ ಬೇರೊಂದನ್ನು ವರ್ಣಿಸಿ ಅದರ ಮುಖಾಂತರ ಅದರ ಗುಣದೋಷಗಳನ್ನು ಸೂಚಿಸುವದು. ಇದಕ್ಕೆ ಅನ್ಯಾಪದೇಶವೆಂದೂ ಕರೆಯುವರು. ಇಂಥ ಶ್ಲೋಕರಚನೆಯು ಸಂಸ್ಕೃತದಲ್ಲಿ ಪ್ರಾಚೀನಕಾಲದಿಂದಲೂ ಬಳಕೆಯಲ್ಲಿದೆ. ಒಂಬತ್ತನೆಯ ಶತಮಾನದ ಕಾಶ್ಮೀರದ ಭಲ್ಲಟ್ಟನ ಶತಕವು ಇಂಥ ರಚನೆಗೆ ಒಂದು ಉತ್ತಮ ನಿದರ್ಶನ. ಅನೇಕ ಕವಿಗಳ ಇಂಥ ಅನ್ಯೋಕ್ತಿಗಳು ಬಿಡಿಯಾಗಿ ಸುಭಾಷಿತಸಂಗ್ರಹಗಳಲ್ಲಿ ದೊರೆಯುತ್ತವೆ. ಆದರೆ, ಭಾಮಿನೀ ವಿಲಾಸದಲ್ಲಿ ಒಂದು 'ಉಲ್ಲಾಸ'ವೇ ಇದಕ್ಕೆ ಮೀಸಲಾಗಿದೆ. ಜಗನ್ನಾಥಪಂಡಿತನ ಕಾಲ ಕ್ರಿ.ಶ. ೧೭ನೆಯ ಶತಮಾನ. ಇವನು ಆಂಧ್ರ ಪ್ರದೇಶದವನಾದರೂ ದಿಲ್ಲಿಯ ಮೊಗಲರಾಜರ ಆಸ್ಥಾನ ಕವಿಯಾಗಿದ್ದನು. ಜಹಾಂಗೀರ ಮತ್ತು ಶಹಾಜಹಾನ ಇಬ್ಬರ ಕಾಲದಲ್ಲಿಯೂ ಇದ್ದನು.

दिल्लीवल्लभपाणिपल्लवतले नीतं नवीनं वयः ।

ಎಂದು ಇವನೇ ಹೇಳುವನು. ಆಸಾಮಿನ ಪ್ರಾಣನಾರಾಯಣನ ಆಸ್ಥಾನ ದಲ್ಲಿಯೂ ಕೆಲದಿನ ಇದ್ದನು. ಆಗಿನ ಕಾಲದ ಅನೇಕ ರಾಜರು ಇವನನ್ನು ಆಸ್ಥಾನಕವಿಯನ್ನಾಗಿಮಾಡಿಕೊಳ್ಳಲು ಅಪೇಕ್ಷಿಸುತ್ತಿದ್ದರೆಂದು ತಿಳಿದು ಬರುತ್ತದೆ.

दिल्लीश्वरो वा जगदीश्वरो वा मनोरथान् पूरयितुं समर्थः ।
अन्यैर्नृपालैः परिदीयमानं शाकाय वा स्यात् लवणाय वा स्यात् ॥

ಎಂದು ಇವನ ಒಂದು ವಿನೋದೋಕ್ತಿಯು ಇದನ್ನು ಸೂಚಿಸುತ್ತದೆ. ಪ್ರಸಿದ್ಧ ವೈಯ್ಯಾಕರಣಿಯಾದ ಭಟ್ಟೋಜಿ ದೀಕ್ಷಿತನೂ ಕವಿ, ಆಲಂಕಾರಿಕ ಮತ್ತು ವೇದಾಂತಿಯಾದ ಅಪ್ಪಯ್ಯ ದೀಕ್ಷಿತರೂ ಇವನಿಗೆ ಸಮಕಾಲೀನರಾಗಿದ್ದರು ಮತ್ತು ಇವರಲ್ಲಿ ವಾದ-ವಿವಾದಗಳಾಗುತ್ತಿದ್ದವು.

'ರಸಗಂಗಾಧರ' ಮತ್ತು 'ಚಿತ್ರಮೀಮಾಂಸಾ' ಎಂಬ ಎರಡು ಶ್ರೇಷ್ಠವಾದ ಅಲಂಕಾರಗ್ರಂಥಗಳನ್ನು ಬರೆದಿರುವನು. ಸುಧಾಲಹರೀ, ಅಮೃತಲಹರೀ, ಲಕ್ಷ್ಮೀಲಹರೀ, ಕರುಣಾಲಹರೀ, ಗಂಗಾಲಹರೀ ಎಂಬ ಐದು ಲಹರಿಗಳನ್ನು ಬರೆದಿರುವನು.

ಭಾಮಿನೀವಿಲಾಸವು ಇವನು 'ರಸಗಂಗಾಧರ'ದಲ್ಲಿ ಉದಾಹರಣೆಯಾಗಿ ಕೊಡಲು ರಚಿಸಿಕೊಂಡ ಮತ್ತು ಬೇರೆ ಬೇರೆ ಸಂದರ್ಭಗಳಲ್ಲಿ ಬಿಡಿಯಾಗಿ ರಚಿಸಿದ ಶ್ಲೋಕಗಳ ಸಂಕಲನವು. ಇವು ವಿಶಕಲಿತವಾಗಿ ಉಳಿದರೆ ದುರ್ಜನರು ತಮ್ಮವೆಂದು ಕೃತಿಚೌರ್ಯವನ್ನು ಮಾಡಿ ಪ್ರಚುರಪಡಿಸಬಹುದು. ಆದುದರಿಂದ ಈ ಸಂಕಲನ ವನ್ನು ಮಾಡಿದ್ದೇನೆ, ಎಂದು ಜಗನ್ನಾಥನೇ

दुर्वृत्ता जारजन्मानो हरिष्यन्तीति शङ्कया ।
मदीयपद्यरत्नानां मञ्जूषेयं कृतिर्मम ॥

ಎಂಬ ಕೊನೆಯ ಪದ್ಯದಲ್ಲಿ ಹೇಳಿದ್ದಾನೆ. ಇದರಲ್ಲಿಯ ಕೆಲವು ಸುಂದರ ಪದ್ಯ ಗಳನ್ನೂ ಜಗನ್ನಾಥನ ಕೃತಿಯ ಸೊಬಗನ್ನೂ ಪರಿಚಯಮಾಡಿಕೊಡುವ ದೃಷ್ಟಿ ಯಿಂದ ಈ ಪಾಠದಲ್ಲಿ ಕೊಟ್ಟಿದ್ದೇವೆ.

'ಸುಭಾಷಿತಾನಿ' ಎಂಬ ಕೊನೆಯ ಪಾಠದಲ್ಲಿ ಶೌನಕೀಯ ನೀತಿಸಾರ ಮತ್ತು ಬೃಹಸ್ಪತಿಯ ನೀತಿಸಾರಗಳಿಂದ ಲೋಕಾನುಭವವನ್ನು ವಿವರಿಸುವ ಮತ್ತು ವಿವೇಕವನ್ನು ಬೋಧಿಸುವ ಕೆಲವು ಸುಭಾಷಿತಗಳನ್ನು ಆಯ್ದುಕೊಡ ಲಾಗಿದೆ. ಸುಭಾಷಿತಗಳು ಸಂಸ್ಕೃತ ಸಾಹಿತ್ಯದಲ್ಲಿ ವಿಶೇಷವಾದ ಸ್ಥಾನವನ್ನು ಪಡೆದಿವೆ. ಮಹಾಭಾರತ-ರಾಮಾಯಣಗಳಿಂದ, ನೀತಿಗ್ರಂಥಗಳಿಂದ, ಕಾವ್ಯ-ನಾಟಕಾದಿಗಳಿಂದ ಆಯ್ದ ಸುಭಾಷಿತಗಳಲ್ಲದೆ, ಅನೇಕ ಕವಿಗಳು ಬಿಡಿಯಾಗಿ ರಚಿಸಿದ ಸುಭಾಷಿತಗಳೂ ಇವೆ. ಸದುಕ್ತಿಕರ್ಣಾಮೃತ, ಶಾರ್ಙ್ಗಧರಪದ್ಧತಿ,

ಸುಭಾಷಿತಾವಲೀ, ಸೂಕ್ತಿಮುಕ್ತಾವಲೀ, ಸುಭಾಷಿತರತ್ನಭಾಂಡಾಗಾರ ಇತ್ಯಾದಿ ಅನೇಕ ಸುಭಾಷಿತಗಳ ಸಂಕಲನಗಳಿವೆ. ಇವು ಸಹೃದಯತೆ, ವಿವೇಕ, ವ್ಯವಹಾರ ಚಾತುರ್ಯಗಳ ಬೆಳವಣಿಗೆಗೆ ತುಂಬ ಸಹಾಯಕವಾಗಿವೆ.

ಈವರೆಗೆ ವಿವರಿಸಿದ ಈ ಗದ್ಯಪದ್ಯಮಂಜರಿಯಲ್ಲಿಯ ವಿಷಯಗಳ ವೈವಿಧ್ಯ, ವ್ಯಾಪ್ತಿ, ಪ್ರಮುಖಕವಿಗಳ ಮತ್ತು ಪ್ರಮುಖಸಾಹಿತ್ಯಪ್ರಕಾರಗಳ ಪ್ರಾತಿನಿಧ್ಯ, ಸಾಮಾನ್ಯ ಮತ್ತು ಬುದ್ಧಿವಂತ ವಿದ್ಯಾರ್ಥಿಗಳಿಬ್ಬರ ಆಸಕ್ತಿಯನ್ನೂ ಕೆರಳಿಸುವಂತೆ ಕೆಲವು ಸುಲಭಶೈಲಿಯ ಕೆಲವು ಪ್ರೌಢಶೈಲಿಯ ಪಾಠಗಳ ಆಯ್ಕೆ, ಸಹೃದಯತೆ ಮತ್ತು ವಿಚಾರಪ್ರಚೋದನೆ ಎರಡಕ್ಕೂ ಅವಕಾಶವಿರುವ ಭಾಗಗಳ ಆಯ್ಕೆಗಳು ಪದವಿಯ ಮೊದಲನೇ ತರಗತಿಗಳಲ್ಲಿ ಈಗಾಗಲೇ ಬಹುಸಂಖ್ಯೆ ವಿದ್ಯಾರ್ಥಿಗಳನ್ನು ಆಕರ್ಷಿಸುತ್ತಿರುವ ಸಂಸ್ಕೃತ ಅಧ್ಯಯನವು ಇನ್ನೂ ಹೆಚ್ಚು ಸಂಖ್ಯೆಯಲ್ಲಿ ವಿದ್ಯಾರ್ಥಿಗಳನ್ನು ಆಕರ್ಷಿಸುವದೆಂದೂ ವಿದ್ಯಾರ್ಥಿಗಳ ಜ್ಞಾನಾರ್ಜನೆಗೆ ಇನ್ನೂ ಹೆಚ್ಚು ಪ್ರಯೋಜನಕಾರಿಯಾಗುವದೆಂದೂ ನಂಬುವೆವು.

---

# संस्कृतगद्यपद्यमञ्जरी

## १. कविकाव्यप्रशंसा

इदं कविभ्यः पूर्वेभ्यः नमोवाकं प्रशास्महे ।
वन्देमहि च तां वाणीममृतामात्मनः कलाम् ॥ १ ॥

भाषासु मुख्या मधुरा दिव्या गीर्वाणभारती ।
तस्माद्धि काव्यं मधुरं तस्मादपि सुभाषितम् ॥ २ ॥

श्रियः प्रदुग्धे विपदो रुणद्धि
यशांसि सूते मलिनं प्रमार्ष्टि ।
संस्कारशौचेन परं पुनीते
शुद्धा हि बुद्धिः किल कामधेनुः ॥ ३ ॥

धर्मार्थकाममोक्षेषु वैचक्षण्यं कलासु च ।
करोति कीर्तिं प्रीतिं च साधुकाव्यनिषेवणम् ॥ ४ ॥

कविः पिता पोषयति पालको रसिकः पतिः ।
कविता युवतेर्नूनं सोदरास्तु विवेकिनः ॥ ५ ॥

ख्याता नराधिपतयः कविसंश्रयेण
राजाश्रयेण च गताः कवयः प्रसिद्धिम् ।
राज्ञा समोऽस्ति न कवेः परमोपकारी
राज्ञो न चास्ति कविना सदृशः सहायः ॥ ६ ॥

वल्मीकप्रभवेण रामनृपतिर्व्यासेन धर्मात्मजो
व्याख्यातः किल कालिदासकविना श्रीविक्रमाङ्को नृपः ।
भोजश्चित्तपबिल्हणप्रभृतिभिः कर्णोऽपि विद्यापतेः
ख्यातिं यान्ति नरेश्वराः कविवरैः स्फारैर्न भेरीरवैः ॥ ७ ॥

व्यासः —

नमः सर्वविदे तस्मै व्यासाय कविवेधसे।
चक्रे पुण्यं सरस्वत्या यो वर्षमिव भारतम् ॥ ८ ॥

वाल्मीकिः —

चेतसोस्तु प्रसादाय सतां प्राचेतसो मुनिः।
पृथिव्यां पद्यनिर्माणविद्यायाः प्रथमं पदम् ॥ ९ ॥

भासः —

सूत्रधारकृतारम्भैर्नाटकैर्बहुभूमिकैः।
स पताकैर्यशो लेभे भासो देवकुलैरिव ॥ १० ॥

कालिदासः —

दासतां कालिदासस्य कवयः के न बिभ्रति।
इदानीमपि तस्यार्थानुपजीवन्त्यमी यतः ॥ ११ ॥

बाणभट्टः —

वाणीपाणिपराभृष्टवीणानिक्वाणहारिणीम्।
भावयन्ति कथं वान्ये भट्टबाणस्य भारतीम् ॥ १२ ॥

दण्डी —

आचार्यदण्डिनो वाचामाचान्तामृतसंपदाम्।
विकासो वेधसः पत्न्या विलासमणिदर्पणम् ॥ १३ ॥

भारविः —

विमर्दव्यक्तसौरभ्या भारती भारवेः कवेः।
धत्ते बकुलमालेव विदग्धानां चमत्क्रियाम् ॥ १४ ॥

भवभूतिः —

भवभूतेः सम्बन्धाद्भूधरभूरेव भारती भाति।
एतत्कृतकारुण्ये किमन्यथा रोदिति ग्रावा ॥ १५ ॥

चोर-मयूर-हर्षादयः —

यस्याश्चोरश्चिकुरनिकुरः कर्णपूरो मयूरो
भासो हासः कविकुलगुरुः कालिदासो विलासः।
हर्षो हर्षो हृदयवसतिः पञ्चबाणस्तु बाणः
केषां नैषा कथय कविताकामिनी कौतुकाय ॥ १६ ॥

विज्जिका —

सरस्वतीव कर्णाटी विजयाङ्का जयत्यसौ ।
या वैदर्भगिरां वासः कालिदासादनन्तरम् ॥ १७ ॥

शीला-मारुलादि कवयित्र्यः —

शीलाविज्जामारुलामोरिकाद्याः
काव्यं कर्तुं सन्ति विज्ञाः स्त्रियोऽपि ।
विद्यां वेत्तुं वादिनो निर्विजेतुं
दातुं वक्तुं यः प्रवीणः स वन्द्यः ॥ १८ ॥

मुरारिः —

देवीं वाचमुपासते हि बहवः सारं तु सारस्वतं
जानीते नितरामसौ गुरुकुलक्लिष्टो मुरारिः कविः ।
अब्धिर्लङ्घित एव वानरभटैः किं त्वस्य गम्भीरिता-
मापातालनिमग्नपीवरतनुर्जानाति मन्थाचलः ॥ १९ ॥

काव्यप्रशंसा —

क्वचिदर्थः क्वचिच्छब्दः क्वचिद्भावः क्वचिद्रसः ।
यत्रैते सन्ति सर्वेऽपि स निबन्धो न लभ्यते ॥ २० ॥

निर्दोषाप्यगुणा वाणी न विद्वज्जनरञ्जनी ।
पतिव्रताप्यरूपा स्त्री परिणेत्रे न रोचते ॥ २१ ॥

गुणं विहाय काव्येषु दुष्टो दोषं गवेषते ।
वनेषु त्यक्तमाकन्दः काको निम्बमपेक्षते ॥ २२ ॥

चौर्यार्जितेन काव्येन कियद्दीव्यति दुर्जनः ।
आहार्यरागो न चिरं रुचिरः कृत्रिमोपलः ॥ २३ ॥

किं कवेस्तस्य काव्येन किं काण्डेन धनुष्मतः ।
परस्य हृदये लग्नं न घूर्णयति यच्छिरः ॥ ॥ २४ ॥

न प्रार्थनीयः सत्काव्यश्रुत्यै सहृदयो जनः ।
स्वादुपुष्परसास्वादे कः प्रेरयति षट्पदम् ॥ २५ ॥

---

# २. अतिथेः राजनीतिः

अतिथिं नाम काकुत्स्थात् पुत्रं प्राप कुमुद्वती ।
पश्चिमाद्यामिनीयामात् प्रसादमिव चेतना ॥ १ ॥

तमादौ कुलविद्यानामर्थमर्थविदां वरः ।
पश्चात्पार्थिवकन्यानां पाणिमग्राहयत्पिता ॥ २ ॥

प्रसन्नमुखरागं तं स्मितपूर्वाभिभाषिणम् ।
मूर्तिमन्तममन्यन्त विश्वासमनुजीविनः ॥ ३ ॥

वसिष्ठस्य गुरोर्मन्त्राः सायकास्तस्य धन्विनः ।
किं तत्साध्यं यदुभये साधयेयुर्न सङ्गताः ॥ ४ ॥

अनित्याः शत्रवो बाह्याः विप्रकृष्टाश्च ते यतः ।
अतः सोऽभ्यन्तरान्नित्यान् षट्पूर्वमजयद् रिपून् ॥ ५ ॥

कातर्यं केवला नीतिः शौर्यं श्वापदचेष्टितम् ।
अतः सिद्धिं समेताभ्यामुभाभ्यामन्वियेष सः ॥ ६ ॥

न तस्य मण्डले राज्ञो न्यस्तप्रणिधिदीधितेः ।
अदृष्टमभवत् किञ्चिद्व्यभ्रस्येव विवस्वतः ॥ ७ ॥

मन्त्रः प्रतिदिनं तस्य बभूव सह मन्त्रिभिः ।
स जातु सेव्यमानोऽपि गुप्तद्वारो न सूच्यते ॥ ८ ॥

दुर्गाणि दुर्ग्रहाण्यासंस्तस्य रोद्धुरपि द्विषाम् ।
न हि सिंहो गजास्कन्दी भयाद्गिरिगुहाशयः ॥ ९ ॥

अपथेन प्रववृते न जातूपचितोऽपि सः ।
वृद्धौ नदीमुखेनैव प्रस्थानं लवणाम्भसः ॥ १० ॥

न धर्ममर्थकामाभ्यां बबाधे न च तेन तौ ।
नार्थं कामेन कामं वा सोऽर्थेन सदृशस्त्रिषु ॥ ११ ॥

हीनान्यनुपकर्तॄणि प्रवृद्धानि विकुर्वते ।
तेन मध्यमशक्तीनि मित्राणि स्थापितान्यतः ॥ १२ ॥

कोशेनाश्रयणीयत्वमिति तस्यार्थसंग्रहः ।
अम्बुगर्भो हि जीमूतश्चातकैरभिनन्द्यते ॥ १३ ॥

सर्पस्येव शिरोरत्नं नास्य शक्तित्रयं परः ।
स चकर्ष परस्मात्तदयस्कान्त इवायसम् ॥ १४ ॥

खनिभिः सुषुवे रत्नं क्षेत्रैः सस्यं वनैर्गजान् ।
दिदेश वेतनं तस्मै रक्षासदृशमेव भूः ॥ १५ ॥

इति क्रमात् प्रयुञ्जानो राजनीतिं चतुर्विधाम् ।
आतीर्थादप्रतीघातं स तस्याः फलमानशे ॥ १६ ॥

—महाकविकालिदासविरचितरघुवंशमहाकाव्यस्य सप्तदशसर्गादुद्धृतम् ।

---

## ३. सहसा विदधीत न क्रियाम्

इति दर्शितविक्रियं सुतं मरुतः कोपपरीतमानसम् ।
उपसान्त्वयितुं महीपतिर्द्विरदं दुष्टमिवोपचक्रमे ॥ १ ॥

अपवर्जितविप्लवे शुचौ हृदयग्राहिणि मङ्गलास्पदे ।
विमला तव विस्तरे गिरां मतिरादर्श इवाभिदृश्यते ॥ २ ॥

स्फुटता न पदैरपाकृता न च न स्वीकृतमर्थगौरवम् ।
रचिता पृथगर्थता गिरां न च सामर्थ्यमपोहितं क्वचित् ॥ ३ ॥

उपपत्तिरुदाहृता बलादनुमानेन न चागमः क्षतः ।
इदमीदृगनीदृगाशयः प्रसभं वक्तुमुपक्रमेत कः ॥ ४ ॥

अवितृप्ततया तथापि मे हृदयं निर्णयमेव धावति ।
अवसाययितुं क्षमाः सुखं न विधेयेषु विशेषसंपदः ॥ ५ ॥

सहसा विदधीत न क्रियामविवेकः परमापदां पदम् ।
वृणुते हि विमृश्यकारिणं गुणलुब्धाः स्वयमेव सम्पदः ॥ ६ ॥

शुचि भूषयति श्रुतं वपुः प्रशमस्तस्य भवत्यलंक्रिया ।
प्रशमाभरणं पराक्रमः स नयापादितसिद्धिभूषणः ॥ ७ ॥

स्पृहणीयगुणैर्महात्मभिश्चरिते वर्त्मनि यच्छतां मनः ।
विधिहेतुरहेतुरागसां विनिपातोऽपि समः समुन्नतेः ॥ ८ ॥

बलवानपि कोपजन्मनस्तमसो नाभिभवं रुणद्धि यः ।
क्षयपक्ष इवैन्दवीः कलाः सकला हन्ति स शक्तिसम्पदः ॥ ९ ॥

अतिपातितकालसाधना स्वशरीरेन्द्रियवर्गतापिनी ।
जनवन्नभवन्तमक्षमा नयसिद्धेरपनेतुमर्हति ॥ १० ॥

मदमानसमुद्धतं नृपं न वियुङ्क्ते नियमेन मूढता ।
अतिमूढ उदस्यते नयान्नयहीनादपरज्यते जनः ॥ ११ ॥

अपरागसमीरणेरितः क्रमशीर्णाकुलमूलसन्ततिः ।
सुकरस्तरुवत्सहिष्णुना रिपुरुन्मूलयितुं महानपि ॥ १२ ॥

अनुशासितमित्यनाकुलं नयवर्त्माकुलमर्जुनाग्रजम् ।
स्वयमर्थमिवाभिवाञ्छितस्तमभीयाय पराशरात्मजः ॥ १३ ॥

अथोच्चकैरासनतः परार्घ्या-
दुद्यन्स धूतारुणवल्कलाग्रः ।
रराज कीर्णाकपिशांशुजालः
शृङ्गात्सुमेरोरिव तिग्मरश्मिः ॥ १४ ॥

अवहितहृदयो विधाय सोऽर्हा-
मृषिवदृषिप्रवरे गुरूपदिष्टाम् ।
तदनुमतमलंचकार पश्चात्
प्रशम इव श्रुतमासनं नरेन्द्रः ॥ १५ ॥

—महाकविभारविविरचितकिरातार्जुनीयमहाकाव्यस्य द्वितीयसर्गादुद्धृतम् ।

## ४. दशरथबाणविद्धस्य मुनिपुत्रस्य विलापः

प्रभुः प्रजानामथ स प्रभाते हरिप्रभावो हरिमारुरोह ।
सज्जीकृतं सज्जनगीतकीर्तिर्बद्धायुधो बन्धुरवर्मजालम् ॥ १ ॥

कश्चिन्मृगं मार्गणगोचरेऽसौ दृष्ट्वा प्रसह्यायतचापदण्डः ।
शरं मुमुक्षुः शरभोरुवेगं तमन्वयादन्वयकेतुभूतः ॥ २ ॥

विलङ्घ्य मार्गं नृपमार्गणानां रेखायमाणो गगने रथेन ।
मृगोत्तमोऽसौ तमसातटस्थं वनं तपस्यद्भवनं प्रपेदे ॥ ३ ॥

धनुस्सहायोऽश्मवति प्रदेशे विहाय वाहं सहसा नृवीरः ।
चचार पद्भ्यां गहने तरूणामसौ वने तत्पददत्तदृष्टिः ॥ ४ ॥

तटेऽपि तस्या घटपूरणस्य श्रुत्वा रवं बृंहितनादशङ्की ।
शरं शरण्योऽपि मुमोच बाले मुनेस्तनूजे मनुवंशकेतुः ॥ ५ ॥

पुत्रो मुनेः पत्रिविभिन्नमर्मा शरानुसारेण नृपं प्रयातम् ।
नेत्राम्बुदिग्धेन विलापनाम्ना बाणेन भूयो हृदि तं जघान ॥ ६ ॥

त्वया त्वनाथस्य विचक्षुषः किं भग्नोऽयमालम्बनदण्ड एकः ।
वने जरावेशजडीकृतस्य गुरुद्वयस्य व्रतजीर्णमूर्तेः ॥ ७ ॥

एकं त्वया साधयतापि लक्ष्यं नीतं विनाशं त्रितयं निरागः ।
मच्चक्षुषा कल्पितदृष्टिकृत्यौ वृद्धौ वने मे पितरावहं च ॥ ८ ॥

वनेषु वासो मृगयूथमध्ये क्रिया च वृद्धान्धजनस्य पोषः ।
वृत्तिश्च वन्यं फलमेषु दोषः संभावितः को मयि घातहेतुः ॥ ९ ॥

व्रती विनाथो विगतापराधः स्मर्तव्यदृष्टेः पितुरन्धयष्टिः ।
इत्येषु किं निष्करुणेन कश्चिदवध्यभावे गणितो न हेतुः ॥ १० ॥

तरुत्वचोऽयं कठिना वसानो वनेषु शीतोष्णनिपीतसारः ।
अस्वादुवन्याशनजीर्णशक्तिः पात्रं कृपायास्तव वध्यभूतः ॥ ११ ॥

जीर्णो जतुन्याससनिरुद्धरन्ध्रः कुम्भश्च मौञ्जी तरुवल्कलश्च ।
एतेषु यन्मां विनिहत्य गम्यं तद्गृह्यतामस्तु भवान्कृतार्थः ॥ १२ ॥

साधुः कृपामन्थरमक्षि शत्रौ प्रीत्यर्थसंमीलितमादधाति ।
नीचस्तु निष्कारणवैरशीलस्तत्पूर्वसंपादितदर्शनेऽपि ॥ १३ ॥

स्वं हेतवे हेतिबलोपनीतस्मयः किमप्युन्नतवृत्ति कस्मै ।
नीचस्य निष्ठामधिकर्म गच्छन् कुलं कलङ्कैः कलुषीकरोति ॥ १४ ॥

मैवं भवानेनमदुष्टभावं जुगुप्सतां स्माक्षतसाधुवृत्तम् ।
इतीव वाचो निगृहीतकण्ठैः प्राणैररुध्यन्त महर्षिसूनोः ॥ १५ ॥

भोज्यासुतश्चारुभुजद्वयेन घटं गृहीत्वा घटितारिनाशः ।
बाष्पायमाणो बहुमानपात्रं यमप्रभावो यमिनं ददर्श ॥ १६ ॥

पापं विधायापि विधातृतुल्ये सत्यापयामास सतां पुरोगः ।
ततो यतिं घातयतो न सद्यः क्रोधानलेनास्य ददाह देहम् ॥ १७ ॥

दयानुयातस्तनयस्य नाशं श्रुत्वा महर्षिर्मुहुरात्तशोकः ।
दिदेश देशस्तुतसद्गुणाय विशं वशी विश्वभुजं स शापम् ॥ १८ ॥

वनजकुसुमधारिणीमलङ्घ्यां
हरिनखपातविपाटितोरुगण्डाम् ।
श्रियमिव नृपतिर्मृगव्यभूमिं
चिरमनुभूय गृहोन्मुखो बभूव ॥ १९ ॥

अथ स विषमपादगोपितार्थं
जगदुपयोगवियुक्तभूरिधातुम् ।
बहुतुहिननिपातदोषदुष्टं
गिरिमरहत्कुकवेरिव प्रबन्धम् ॥ २० ॥

—कुमारदासविरचितजानकीहरणमहाकाव्यस्य प्रथमसर्गादुद्धृतम् ।

---

सपत्नः ಶತ್ರು, अपनयः ಅಪಕಾರ, अनुशयः ಪಶ್ಚಾತ್ತಾಪ, रामायाः ओष्ठबिम्बस्य चुम्बनेन वित्तः तेन "वित्तश्चुंचुप् चणपौ" ಎಂಬ ಸೂತ್ರದಿಂದ ಚುಂಚುಪ್ ಪ್ರತ್ಯಯವು ಬಂದಿದೆ.

**7.** वदनमेव छद्म यस्य तत् पद्मं तस्य पर्यन्तपातिनः ಮುಖವೆಂಬ ಕಮಲದ ಹತ್ತಿರ ಹಾರಾಡುತ್ತಿರುವ, मधुलिहः ಭ್ರಮರಗಳನ್ನು, उदग्रैः दशनानाम् अंशुभिः ಹರಡುತ್ತಿರುವ ಹಲ್ಲುಗಳ ಕಾಂತಿಯಿಂದ जगाद–गद व्यक्तायां वाचि ಧಾತುವಿನ ಲಿಟ್ ತೃತೀಯ ಪುರುಷ ಏಕವಚನ.

**8.** अनादीनवम् ದೋಷರಹಿತವಾದ, न आदीनवं अनादीनवं 'दोष आदीनवो मतः' इत्यमरः, सपदि ಕೂಡಲೇ (ಅವ್ಯಯ).

**9.** लघु ಸಂಕ್ಷಿಪ್ತ, भूयस्या ವಿಸ್ತಾರವಾದ, अतिशय्यते–अति + शीङ् (शीङ् स्वप्ने) ಎಂಬ ಧಾತುವಿನ ಕರ್ಮಣಿ ಲಟ್ ತೃತೀಯ ಪುರುಷ ಏಕವಚನ. इन्धनौघान् दहतीति इन्धनौघधक् ಕಟ್ಟಿಗೆಗಳ ರಾಶಿಯನ್ನೇ ಸುಡುವ, त्विषा ಕಾಂತಿಯಿಂದ.

**10.** ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ, ಸಮಾಶ್ರಯಣ ಇವು ಷಡ್ಗುಣಗಳು.

ಪ್ರಭುತ್ವ, ಮಂತ್ರ, ಉತ್ಸಾಹ ಇವು ಶಕ್ತಿತ್ರಯಗಳು. ಪ್ರಭುಸಿದ್ಧಿ, ಮಂತ್ರಸಿದ್ಧಿ, ಉತ್ಸಾಹಸಿದ್ಧಿ ಇವು ಸಿದ್ಧಿತ್ರಯಗಳು. ವೃದ್ಧಿ, ಕ್ಷಯ, ಮತ್ತು ಅವಸ್ಥಾನ ಇವು ಮೂರು ಉದಯಗಳು.

**11.** ज्यानिः ಅಳಿವು, इयती ಇಷ್ಟು, ऊरीकृत्य ಅಂಗೀಕರಿಸಿ, कृतिभिः ಕುಶಲರಾದವರಿಂದ, वाचस्पत्यम् ವಾಗ್ಮಿತೆ, प्रतायते ವಿಸ್ತರಿಸಲ್ಪಡುತ್ತದೆ, प्र + तन् तनु विस्तारे ಧಾತುವಿನ ಲಟ್ ತೃತೀಯ ಪುರುಷ.

**12.** सुस्थिरं मन्यते इति सुस्थिरंमन्यः ಸ್ಥಿರವಾಗಿದ್ದೇನೆ ಎಂದು ಭಾವಿಸುವವನು.

**13.** अखिलीकृत्य ನಿರ್ಮೂಲಗೊಳಿಸದೆ, ಕಿತ್ತೊಗೆಯದೆ, पङ्कताम् अनीत्वा ಕೆಸರನ್ನಾಗಿ ಮಾಡದೆ, ಇಳಿಸದೆ.

**14.** विप्रकृतः ಅಪಕಾರ ಮಾಡಲ್ಪಟ್ಟಿರುವನು, ಅರ್ಥಾಂತರನ್ಯಾಸ.

**15.** सामर्षे ಕುಪಿತನಾದ, कक्षः ಕಂಕುಳು, उदर्चिः ಅಗ್ನಿ, मारुतम् अभि अभिमारुतम् (ಅವ್ಯಯೀಭಾವ) ಗಾಳಿಗೆ ಎದುರಾಗಿ, शेरते ಮಲಗುತ್ತಾರೆ, शीङ् स्वप्ने ಧಾತುವಿನ ಲಟ್ ತೃತೀಯ ಪುರುಷ ಬಹುವಚನ, ನಿದರ್ಶನಾಲಂಕಾರ.

**16.** चतुर्थोपायसाध्यः ದಂಡೋಪಾಯಸಾಧ್ಯನಾದ, सान्त्वम् ಸಾಮೋಪಾಯವು, अपक्रिया ಸರಿಯಲ್ಲದ ಕ್ರಮ, स्वेद्यम् ಬೆವರು ಬರುವ, आमज्वरः ಅಜೀರ್ಣ ಜ್ವರ.

**17.** यजतां—यज् देवपूजायाम् ಧಾತುವಿನ ಲೋಟ್ ಲಕಾರ ತೃತೀಯ ಪುರುಷ ಏಕವಚನ. अवतु—अव रक्षणे ಧಾತುವಿನ ಲೋಟ್ ತೃತೀಯ ಪುರುಷ ಏಕವಚನ. इनः ಸೂರ್ಯನು, तपतु तप-संतापे ಧಾತುವಿನ ಲೋಟ್ ಲಕಾರ ತೃತೀಯ ಪುರುಷ ಏಕವಚನ, ಅರ್ಥಾಂತರನ್ಯಾಸ.

**18.** संरम्भिणः ಕ್ಷುಬ್ಧನಾದ, आलेख्यदेवताः ಚಿತ್ರದಲ್ಲಿ ಬರೆಯಲ್ಪಟ್ಟ ದೇವತೆಗಳು, सभायाः भित्तीनां प्रतिध्वानैः ಸಭಾಗೃಹದ ಗೋಡೆಗಳ ಪ್ರತಿಧ್ವನಿಯಿಂದ, अन्ववदन् ಅನುಮೋದಿಸಿದವು, अनु + अवदन्, वद व्यक्तायां वाचि ಧಾತುವಿನ ಲಟ್ ತೃತೀಯ ಪುರುಷ ಬಹುವಚನ.

---

## ೬. वीरकम्पणनृपाय कृपाणप्रदानम्

ಈ ಭಾಗವನ್ನು ಗಂಗಾದೇವಿಯು ಬರೆದ "ಮಧುರಾವಿಜಯ" ಅಥವಾ "ವೀರಕಂಪಣರಾಯಚರಿತ" ಎಂಬ ಕಾವ್ಯದಿಂದ ಆಯ್ದುಕೊಳ್ಳಲಾಗಿದೆ. ಮಧುರಾ ವಿಜಯವು ಪೂರ್ಣವಾಗಿ ಉಪಲಬ್ಧವಾಗಿಲ್ಲ. ಎಂಟು ಸರ್ಗಗಳು ಮಾತ್ರ ದೊರೆತಿವೆ. ಈ ಕಾವ್ಯದಲ್ಲಿ ವಿಜಯನಗರದ ರಾಜನಾದ ಬುಕ್ಕರಾಜನ ಮಗ ವೀರಕಂಪಣನು ದಕ್ಷಿಣ ದೇಶದ ದಂಡಯಾತ್ರೆಯನ್ನು ಕೈಕೊಂಡದ್ದು ಮತ್ತು ಅವನಿಗೆ ಒಂದು ದಿನ ಕನಸಿನಲ್ಲಿ ಮಧುರಾ ನಗರದ ಅಧಿದೇವತೆಯು ಪ್ರತ್ಯಕ್ಷಳಾಗಿ ಮುಸಲ್ಮಾನರ ಧಾಳಿಯಿಂದ ಹಾಳಾದ ಮಧುರಾ ನಗರದ ದುರವಸ್ಥೆಯನ್ನು ವರ್ಣಿಸಿ ಅವನಿಗೆ ಒಂದು ಖಡ್ಗವನ್ನು ಕೊಟ್ಟು ಶತ್ರುಗಳನ್ನು ನಿರ್ಮೂಲಗೊಳಿಸು ಎಂದು ಆದೇಶಿಸುವುದು ವರ್ಣಿಸಲ್ಪಟ್ಟಿದೆ. ಗಂಗಾದೇವಿಯ ಶೈಲಿಯು ಸುಲಭವೂ ಸುಂದರವೂ ಆಗಿದೆ. ಕಾವ್ಯದ ಆರಂಭದಲ್ಲಿ ಅವಳು ತನಗಿಂತ ಹಿಂದಿನ ಮಹಾ ಕವಿಗಳನ್ನು ಅವರವರ ಕಾವ್ಯಗಳ ವೈಶಿಷ್ಟ್ಯವನ್ನು ಸೂಚಿಸಿ ಸುಂದರವಾಗಿ ವರ್ಣಿಸುತ್ತಾಳೆ. ಅವಳ ಈ ಕೆಲವು ಶ್ಲೋಕಗಳನ್ನು "ಕವಿ-ಕಾವ್ಯಪ್ರಶಂಸಾ" ಎಂಬ ಮೊದಲನೆಯ ಭಾಗದಲ್ಲಿ ಆಯ್ದುಕೊಡಲಾಗಿದೆ. ಹಿಂದಿನ ಮಹಾ ಕವಿಗಳ ಪದ್ಧತಿಯನ್ನನುಸರಿಸಿ ಅವಳು ತನ್ನ ಈ ಕಾವ್ಯದಲ್ಲಿ ಸೂರ್ಯಾಸ್ತ, ಚಂದ್ರೋದಯ, ಋತುಗಳು ಇವುಗಳನ್ನು ಸುಂದರವಾಗಿ ವರ್ಣಿಸುತ್ತಾಳೆ. ಮಹಿಳೆಯರ ಪ್ರತಿಭೆಗೆ ತೋರಬಹುದಾದ ಕೆಲವು ಸುಂದರವಾದ ಉಪಮಾನಗಳೂ, ಉತ್ಪ್ರೇಕ್ಷೆಗಳೂ ಇಲ್ಲಿವೆ. ಈ ಕಾವ್ಯವು ವೀರರಸಪ್ರಧಾನವಾದುದು. ಇಲ್ಲಿ ಬುಕ್ಕರಾಜನ ಮತ್ತು ವಿಜಯನಗರದ ರಾಜಧಾನಿಯ ವೈಭವವು ಸೊಗಸಾಗಿ ವರ್ಣಿಸಲ್ಪಟ್ಟಿದೆ.

ಈ ಭಾಗದಲ್ಲಿ ಮಧುರೆಯ ಅಧಿದೇವತೆಯು ಕಂಪಣರಾಯನ ಕನಸಿನಲ್ಲಿ ಬಂದು ಮಧುರೆಯ ದುರವಸ್ಥೆಯನ್ನು ವರ್ಣಿಸಿ ಅವನಿಗೆ ಖಡ್ಗವನ್ನು ಕೊಟ್ಟ ಕಥಾಭಾಗವು ಇದೆ.

**1.** घुणजग्धकपाटसम्पुटानि स्फुटदूर्वाङ्कुरसन्धिमण्डपानि, श्लथगर्भगृहाणि अन्यानि देवताकुलान्यपि वीक्ष्य भृशं दूये ।

घुणैः जग्धानि कपाटानां सम्पुटानि येषां तानि ಕಟ್ಟಿಗೆಯ ಹುಳುಗಳಿಂದ ತಿನ್ನಲ್ಪಟ್ಟ ಬಾಗಿಲುಗಳಿರುವ, स्फुटानि दूर्वाङ्कुराणि यासु ताः, स्फुटदूर्वाङ्कुराः सन्धयः येषु तानि, स्फुटदूर्वाङ्कुरसन्धीनि मण्डपानि येषां तानि ಮಂಟಪದ ಸಂದಿಗಳಲ್ಲಿ

ಹುಲ್ಲು ಬೆಳೆದಿರುವ, श्लथानि गर्भगृहाणि येषां तानि ಶಿಥಿಲವಾದ ಗರ್ಭಗುಡಿ ಗಳಿರುವ, दूये ದುಃಖಿಸುತ್ತೇನೆ.

**2.** पुरा मृदङ्गघोषैः मुखराणि यानि देवकुलानि अभूवन्, तानि इदानीं भयङ्करैः फेरवाणां निनदैः अभितः तुमुलानि भवन्ति ।

मृदङ्गघोषैः मुखराणि ಮೃದಂಗಗಳ ಘೋಷಗಳಿಂದ ತುಂಬಿದ, अभितः ಸುತ್ತಲೂ (ತಸಿಲ್ ಪ್ರತ್ಯಯಾಂತ ಅವ್ಯಯ), फेरवः ಬಾವಲಿ, ತೊಗಲಹಕ್ಕಿ, तुमुलानि ತುಂಬಿರುವ.

**3.** चिरन्तनीं स्वसीमाम् अतिलङ्घ्य अपदेषु अर्पितजीवनप्रवृत्तिः मुहुः उत्पथगामिनी सह्यकन्या अधुना तुलुष्कान् अनुकरोति, हा !

चिरन्तनीम् ಮೊದಲಿನಿಂದಲೂ ಇದ್ದ, स्वसीमाम् ತನ್ನ ಎಲ್ಲೆಯನ್ನು, अर्पित-जीवनप्रवृत्तिः ನೀರಿನ ಪ್ರವಾಹವನ್ನು ಹರಿಯಿಸುವ, (ತುಲುಷ್ಕ ಪದಕ್ಕೆ ವಿಶೇಷಣ ವಾದಾಗ) ಜೀವನಕ್ರಮವನ್ನು ಅನುಸರಿಸುವ, उत्पथगामिनी ಮಾರ್ಗ ಬಿಟ್ಟು ಚಲಿಸುವ, सह्यकन्या ಕಾವೇರೀ ನದಿಯು.

**4.** प्राक् सतताध्वरधूमसौरभैः निगमोद्घोषणवद्भिः अग्रहारैः, अधुना, अधिक-क्षीबतुलुष्कसिंहनादैः विस्रमांसगन्धैः अजनि ।

सततं अध्वराणां धूमस्य सौरभं येषु तैः ಯಾವಾಗಲೂ ಯಾಗಗಳ ಹೊಗೆಯ ಸುವಾಸನೆಯಿಂದ ತುಂಬಿದ, निगम ವೇದಗಳು, विस्रमांसगन्धैः ಬೇಯಿಸದ ಮಾಂಸದ ದುರ್ವಾಸನೆಯುಳ್ಳ, अधिकक्षीबतुलुष्कसिंहनादैः ತುಂಬ ಮದವೇರಿದ ತುರುಕರ ಚೀರಾಟಗಳುಳ್ಳ, अजनि ಆಯಿತು.

**5.** खण्डितनालिकेरषण्डं परितः नृकरोटिकोटिहारप्रचलच्छूलपरम्परापरीतं मधुरोपवनं निरीक्ष्य बहुशः दूये ।

खण्डितानां नालिकेराणां षण्डः ತುಂಡರಿಸಲ್ಪಟ್ಟ ತೆಂಗಿನ ಮರಗಳ ಸಾಲು ಗಳಿರುವ. नृणां करोटयः तासां कोट्यः तासां हाराः तैः प्रचलन्ती शूलानां परम्परा तया परीतम् ಮಾನವರ ಕೋಟಿಗಟ್ಟಲೆ ತಲೆಬುರುಡೆಗಳ ಹಾರಗಳು ನೇತಾಡುವ ಶೂಲದ ಕಂಬಗಳು ಸಾಲು ಸಾಲಾಗಿರುವ.

**6.** यस्मिन् रमणीयतरः रमणीनां मणिनूपुरप्रणादः बभूव, सः राजपथः द्विजश्रृङ्खलिकाखलत्क्रियाभिः स्वकर्णशूलं कुरुते ।

द्विजानां (निगडिताः) श्रृङ्खलिकाः, तासां खलत्क्रियाः ताभिः ದ್ವಿಜರಿಗೆ ತೊಡಿಸಿದ ಬೇಡಿಗಳ ಸದ್ದುಗಳಿಂದ.

**7.** परितस्तततन्तुवायतन्तुव्यतिषङ्गाज्जनितानि जालकानि पुरगोपुरसालभञ्जिकानां चीनपटावगुण्ठनत्वं दधते ।

परितः तताः तन्तुवायाः, तेषां तन्तवः, तेषां व्यतिषङ्गात् ಸುತ್ತಲೂ ಹರಡಿದ ಜೇಡರ ಹುಳುಗಳ ಎಳೆಗಳ ಜೋಡಣೆಯಿಂದ, जालकानि ಜೇಡರ ಬಲೆಗಳು, गोपुरसालभञ्जिकाः ಗೋಪುರದ ಮೇಲೆ ನಿರ್ಮಿಸಲ್ಪಟ್ಟ ಗೊಂಬೆಗಳು, चीनपटः ರೇಶಿಮೆಯ ಬಟ್ಟೆ, अवगुण्ठनम् ಹೊದಿಕೆ.

**8.** राज्ञां यानि गृहाङ्गणानि हिमचन्दनवारिसेकशीतानि अभवन्, तानि द्विजबन्दीनयनाम्बुदूषितानि मम हृदयं खेदयन्ति ।

हिमचन्दनवारिसेकशीतानि ಚಂದನ ಮಿಶ್ರಿತ ನೀರನ್ನು ಸಿಂಪಡಿಸಿ ತಂಪಾಗಿ ಮಾಡಲ್ಪಟ್ಟ, द्विजबन्दीनयनाम्बुदूषितानि ಬಂಧಿಸಲ್ಪಟ್ಟ ದ್ವಿಜರ ಕಣ್ಣೀರುಗಳಿಂದ ದೂಷಿಸಲ್ಪಟ್ಟ.

**9.** जीर्णोपवनेषु कटुघूत्कृतात् घूकलोकात् मे हृदि व्यथा तथा न (भवति) यथा यवनानां भवने परिशीलितपारसीकवाग्भ्यः शुकेभ्यः (भवति)

घूकलोकात् ಗೂಬೆಗಳ ಹಿಂಡುಗಳಿಂದ, कटुघूत्कृतात् ಕರ್ಕಶವಾದ ಘೂತ್ಕಾರಗಳಿಂದ, परिशीलितपारसीकवाग्भ्यः ಪಾರಸಿ ಶಬ್ದಗಳನ್ನು ಕಲಿತುಕೊಂಡ.

**10.** पुरा ताम्रपर्ण्याः यदम्भः तरुणीनां स्तनचन्दनपाण्डु अभवत् तत् नृशंसैः अभितः निहतानां गवाम् असृग्भिः शोणिमानमुपैति ।

असृग्भिः ರಕ್ತ ಪ್ರವಾಹಗಳಿಂದ, शोणिमानम् उपैति ಕೆಂಪಾಗುತ್ತಿದೆ, नृशंसैः ಘಾತುಕರಿಂದ.

**11.** क्षितयः यथापुरं वसूनि न सुवते । शक्रः पूर्ववत् न वर्षति । अस्मिन् विषये यवनैः हतावशिष्टम् जनं शमनोऽपि अकाण्डे नयति ।

सुवते ಜನ್ಮ ಕೊಡುತ್ತವೆ, षूञ् प्राणि प्रसवे ಧಾತುವಿನ ಲಟ್ ತೃತೀಯ ಪುರುಷ ಬಹುವಚನ, शमनः ಯಮ, अकाण्डे ಒಮ್ಮೆಲೇ, विषये ಪ್ರದೇಶದಲ್ಲಿ.

**12.** श्वसितानिलशोषिताधराणि श्लथशीर्णायितचूर्णकुन्तलानि बहुबाष्पपरिप्लुतेक्षणानि द्रमिडानां वदनानि वीक्ष्य दूये ।

श्वसितानिलेन शोषितानि अधराणि येषां तानि ನಿಟ್ಟುಸಿರಿನಿಂದ ಒಣಗಿದ ತುಟಿಗಳುಳ್ಳ, श्लथानि शीर्णायितानि चूर्णकुन्तलानि येषां तानि ಶಿಥಿಲವಾದ ಮತ್ತು ಅಸ್ತವ್ಯಸ್ತವಾದ ಮುಂಗುರುಳುಗಳಿರುವ, बहुबाष्पैः परिप्लुतानि ईक्षणानि येषां तानि ಕಣ್ಣೀರು ತುಂಬಿದ.

**13.** श्रुतिः अस्तमिता, नयः प्रलीनः, धर्मकथा विरता, चरित्रं च्युतम्, सुकृतं गतम्, आभिजात्यमस्तम्, किमिवान्यत्, कलिः एक एव धन्यः ।

नयः ರಾಜನೀತಿ, सुकृतम् ಸತ್ಕಾರ್ಯ, अभिजात्यं ಕುಲೀನತೆ.

**14.** इति सा जनगर्हितं यवनानां निखिलं चरित्रं राज्ञे निवेद्य आत्मनः प्रभावात् अतिभीषणं कमपि कृपाणं प्रादुरभावयत् ।

कृपाणः ಖಡ್ಗ.

**15.** उग्रतपः कृतप्रसादः सः देवः अपि अमुं पाण्ड्यनृपाय प्रददौ । यम् उपेत्य तस्य वंश्याः अप्रतिशासनां पृथिवीं चिरेण अशासन् ।

प्रददौ—दाण् दाने ಲಿಟ್ ತೃತೀಯಾ ಪುರುಷ ಏಕವಚನ.

**16.** मनुजेश्वर अथ पाण्ड्यवंश्यान् कालवशेन गतवीर्यान् अवधार्य, कुम्भजन्मा एनं मण्डलाग्रं महाभुजाय भवते प्रेषितवान् ।

कुम्भे जन्म यस्य सः ಅಗಸ್ತ್ಯ, मण्डलाग्रः ಖಡ್ಗ.

**17.** बलोत्तरः त्वं दक्षिणस्यां मधुरायां पुरि कंसवत् नृशंसं यवनाधिपतिम् अमुना आशु विशस्य अच्युतावतारं स्फुटं विदधीथाः ।

विशस्य (ಲ್ಯಬಂತಾವ್ಯಯ) ಕೊಂದು.

## ೭. शिलापुत्रिका वासवदत्ता

ಈ ಭಾಗವನ್ನು ಸುಬಂಧುವಿನ 'ವಾಸವದತ್ತಾ' ಎಂಬ ಗದ್ಯಕಾವ್ಯದ ಕೊನೆಯ ಭಾಗದಿಂದ ಆಯ್ದುಕೊಳ್ಳಲಾಗಿದೆ. ಸಂಸ್ಕೃತಸಾಹಿತ್ಯದಲ್ಲಿ ಸುಬಂಧು, ಬಾಣ ಮತ್ತು ದಂಡಿ ಈ ಮೂವರೇ ಪ್ರಸಿದ್ಧ ಗದ್ಯ ಕವಿಗಳು. "ವಾಸವದತ್ತಾ" ಗದ್ಯ ಕಾವ್ಯವನ್ನು "कवीनामगलद्दर्पो नूनं वासवदत्तया" ಎಂದು ಬಾಣಭಟ್ಟನೇ ಹೊಗಳಿದ್ದಾನೆ. ಪದಬಂಧ, ಶ್ಲೇಷಯೋಜನೆ, ಸಾಲು ಸಾಲಾದ ವಿಶೇಷಣಗಳು, ಆಮೂಲಾಗ್ರ ವರ್ಣನೆಗಳಲ್ಲಿ ಬಾಣನಷ್ಟು ಪರಿಪಾಕವಿಲ್ಲದೇ ಇದ್ದರೂ ಈ ಗದ್ಯ ಕಾವ್ಯವು ಅದೇ ತರಹದ ವಿನ್ಯಾಸವುಳ್ಳದ್ದಾಗಿದೆ. ಈ ಗದ್ಯ ಕಾವ್ಯದ ನಾಯಿಕೆಗೂ, ಉದಯನನ ಪತ್ನಿ ವಾಸವದತ್ತೆಗೂ ಯಾವ ಸಂಬಂಧವೂ ಇಲ್ಲ. ಇಲ್ಲಿಯ ವಾಸವದತ್ತೆ ಸುಬಂಧುವಿನಿಂದ ಕಲ್ಪಿತ ವ್ಯಕ್ತಿ. ವಾಸವದತ್ತಾ ಮತ್ತು ಕಂದರ್ಪಕೇತು ಎಂಬ ಈರ್ವರ ಪ್ರಣಯದ ಕಥೆಯೇ ಈ ಗದ್ಯ ಕಾವ್ಯದ ಕಥಾವಸ್ತುವು. ಕಥೆ, ಘಟನೆಗಳು, ಪಾತ್ರಗಳು ಎಲ್ಲವೂ ಪುರಾಣೇತಿಹಾಸಗಳ ಆಧಾರವಿಲ್ಲದೆ ಈ ಕವಿಯೇ ಕಲ್ಪಿಸಿದವು.

ಇಲ್ಲಿ ಆಯ್ದಿರುವ ಭಾಗದಲ್ಲಿ ಅಡವಿಯಲ್ಲಿ ಕಂದರ್ಪಕೇತುವೂ ವಾಸವ ದತ್ತೆಯೂ ಕ್ಷಣಕಾಲ ಅಗಲಿದಾಗ ವಾಸವದತ್ತೆಯು ಪ್ರಮಾದದಿಂದ ಒಂದು ಆಶ್ರಮಪ್ರದೇಶಕ್ಕೆ ಹೋಗಿ ಅಲ್ಲಿಯ ಋಷಿಯ ಶಾಪದಿಂದ ಶಿಲಾಮೂರ್ತಿಯಾಗಿ ಕೆಲ ಕಾಲವಾದ ಮೇಲೆ ಅವಳನ್ನು ಹುಡುಕುತ್ತಾ ಬಂದ ಕಂದರ್ಪಕೇತುವಿನ ಹಸ್ತ ಸ್ಪರ್ಶದಿಂದ ಪುನರ್ಜೀವಿತಳಾಗಿ ಪರಸ್ಪರರು ಸಮಾಗಮವನ್ನು ಪಡೆದುದು ಬಂದಿವೆ.

**1–10.** पतङ्गमण्डलम् ಸೂರ್ಯ, विनाकृतम् ಇಲ್ಲದ, ಅಗಲಿದ, विटपिषु ಮರಗಳಲ್ಲಿ, अनवरतम् (ಅವ್ಯಯ) ಯಾವಾಗಲೂ, ದೀರ್ಘವಾದ, ಒಂದೇ ಸಮನೆ ಇರುವ, अन्तर्हितासि ಕಾಣದಂತಾದೆ, नियतिः ಅದೃಷ್ಟ, दुर्विपाकः ದುಷ್ಪರಿಣಾಮ, कच्छोपान्तेन ತೀರದ ಬದಿಯಿಂದ.

**11–20.** निर्वापयामि ಶಮನಗೊಳಿಸಿಕೊಳ್ಳುವೆ, ನಂದಿಸುವೆನು, ग्राहः ಮೊಸಳೆ, कच्छपः ಆಮೆ.

**21–30.** चिकीर्षुः कर्तुमिच्छुः ಸನ್ನಂತ ರೂಪ (ಇಚ್ಛಾರ್ಥಕ), स्मेराणि काश्मीराणि तेषां रजसा पिञ्जरिताः दश दिशः यस्मिन् सः ಅರಳಿದ ಕಾಶ್ಮೀರ

ಕುಸುಮಗಳ (ಕೇಸರಿ ಹೂಗಳ) ಧೂಳಿನಿಂದ ರಂಜಿತವಾದ ದಶದಿಕ್ಕುಗಳಿರುವ, विकस्वर ಅರಳಿದ, अर्णवः ಸಮುದ್ರ.

31–40. तृषा ನೀರಡಿಕೆ, नल्वमात्रम् 200 ಗಜ ಅಳತೆ (400 ಮೊಳ), व्यूहः ಸೈನಿಕರ ಗುಂಪು, उदन्तः ವೃತ್ತಾಂತ, एकामिषलुब्धयोः ಒಂದೇ ಮಾಂಸದ ತುಂಡಿಗಾಗಿ ತವಕಪಡುತ್ತಿರುವ, प्रवृत्तः शराणाम् आसारः एव दुर्दिनं तेन स्थगितानि दिनकरकिरणानि यस्मिन् सः ಬಾಣಗಳ ಮಳೆಗರೆಯುವಿಕೆಯೆಂಬ ದುರ್ದಿನದಿಂದ ಮುಚ್ಚಲ್ಪಟ್ಟ ಸೂರ್ಯನ ಕಿರಣಗಳಿರುವ.

41–50. जीवस्य आकर्षणं यथा स्यात् तथा (अव्ययीभाव) क्षपणकः ಬೌದ್ಧ ಭಿಕ್ಷು, विग्रहः ಶರೀರ.

51–60. प्रतिपन्नवृत्तान्तः ವಿಷಯವನ್ನು ತಿಳಿದ, ಸಮಾಚಾರವನ್ನು ತಿಳಿದ, वराकी ಅನುಕಂಪಕ್ಕೆ ಅರ್ಹಳಾದ.

---

## ೮. चन्द्रापीडस्य विद्याभ्यासः

ಈ ಗದ್ಯಭಾಗವನ್ನು ಬಾಣಭಟ್ಟನ ಕಾದಂಬರಿಯಿಂದ ಆಯ್ದುಕೊಳ್ಳಲಾಗಿದೆ. ಸಂಸ್ಕೃತದಲ್ಲಿ ಗದ್ಯ ಕಾವ್ಯಗಳ ಸಂಖ್ಯೆ ಕಡಿಮೆ. ಅವುಗಳಲ್ಲಿ ಬಾಣಭಟ್ಟನ ಕಾದಂಬರೀ ಮತ್ತು ಹರ್ಷಚರಿತ ಎಂಬ ಎರಡು ಗದ್ಯ ಕಾವ್ಯಗಳೇ ಶ್ರೇಷ್ಠವಾದವುಗಳು. ಕಾದಂಬರಿಯ ಕಥೆ ಸ್ವಲ್ಪಭಿನ್ನವಾದ ರೀತಿಯಲ್ಲಿ ಸೋಮದೇವನ ಕಥಾಸರಿತ್ಸಾಗರದಲ್ಲಿಯೂ ಬರುವುದು. ಆದುದರಿಂದ ಈ ಕಥೆಯು ಗುಣಾಢ್ಯನ ಬೃಹತ್ಕಥೆಯಲ್ಲಿ ಮೊದಲು ಬಂದಿರಬಹುದೆಂದೂ ಅದನ್ನೇ ಬಾಣಭಟ್ಟನು ವಿಸ್ತರಿಸಿ ಬರೆದನೆಂದೂ ಊಹಿಸಬಹುದು. ಈ ಗದ್ಯಕಾವ್ಯದ ಕಥಾನಾಯಕಿಯು ಕಾದಂಬರಿಯಾದ್ದರಿಂದ ಅವಳ ಹೆಸರನ್ನೇ ಇದಕ್ಕೆ ಇಡಲಾಗಿದೆ. ಇಲ್ಲಿ ಕಾದಂಬರೀ–ಚಂದ್ರಾಪೀಡ, ಹಾಗೂ ಮಹಾಶ್ವೇತಾ–ಪುಂಡರೀಕ ಇವರ ಪ್ರಣಯವನ್ನು ಇವರ ಎರಡು ಜನ್ಮಗಳ ವೃತ್ತಾಂತದಲ್ಲಿ ಜೋಡಿಸಿ ವರ್ಣಿಸಲಾಗಿದೆ. ಈ ಗದ್ಯಕಾವ್ಯದ ಶಬ್ದಸಂಪತ್ತು, ಶೈಲಿ, ವರ್ಣನೆ, ಸಾಲು ಸಾಲಾಗಿ ಬರುವ ವಿಶೇಷಣಗಳು, ಶ್ಲೇಷ ಯೋಜನೆ ಇವು ವಾಚಕರನ್ನು ಮುಗ್ಧಗೊಳಿಸುತ್ತವೆ. ಸಂಸ್ಕೃತಭಾಷೆಯ ಸಂಪತ್ತನ್ನೂ, ಸೌಂದರ್ಯವನ್ನೂ, ಪ್ರೌಢಿಮೆಯನ್ನೂ, ಪ್ರಯೋಗವೈವಿಧ್ಯವನ್ನೂ ಇಲ್ಲಿ ನೋಡಬಹುದು. ಕವಿಪ್ರತಿಭೆಯ ವಿಲಾಸವನ್ನು ಇಲ್ಲಿ ಕಾಣಬಹುದು. ಅರಮನೆ–ಆಶ್ರಮ, ಅರಣ್ಯ–ರಾಜಧಾನಿ, ಚಂಡಿಕಾಯತನ–ವಿಲಾಸದ ಉದ್ಯಾನ ಹೀಗೆ ಜೀವನದ ವಿವಿಧ ಮುಖಗಳ ಪ್ರತಿಭಾ ಸಂಪನ್ನವಾದ ವರ್ಣನೆಯನ್ನು ಇಲ್ಲಿ ಕಾಣುತ್ತೇವೆ. ಶಬ್ದಸಂಪತ್ತು, ಕವಿಪ್ರತಿಭೆ, ವಿಚಾರವೈವಿಧ್ಯ ಈ ಎಲ್ಲ ದೃಷ್ಟಿಯಿಂದಲೂ ಇಷ್ಟೊಂದು ಸಮೃದ್ಧವಾದ ಕೃತಿಗಳು ವಿಶ್ವ ಸಾಹಿತ್ಯದಲ್ಲಿಯೇ ದೊರೆಯುವುದು ದುರ್ಲಭ. ಈ ಗದ್ಯಕಾವ್ಯದಿಂದ ಇಲ್ಲಿ ಚಂದ್ರಾಪೀಡನ ವಿದ್ಯಾಭ್ಯಾಸದ ವರ್ಣನೆಯನ್ನು ಆಯ್ದುಕೊಳ್ಳಲಾಗಿದೆ.

**1–10.** चूडाकरणम् ಚೌಲಸಂಸ್ಕಾರ ಮಾಡುವುದು, अतिचक्राम अति+क्रम्–(क्रमु पादविन्यासे) ಧಾತುವಿನ ಲಿಟ್ ತೃತೀಯ ಏಕವಚನ, व्यासंग-विघातार्थं ಅಧ್ಯಯನಕ್ಕೆ ವಿಘ್ನವುಂಟಾಗದಂತೆ, अनुशिप्रम् ಶಿಪ್ರಾನದಿಯ ದಂಡೆಯ ಮೇಲೆ, अर्धक्रोश ಒಂದು ಮೈಲು ದೂರದಲ್ಲಿ (क्रोश ಎರಡು ಮೈಲಿ), तुहिनगिरेः शिखराणां मालां अनुकरोतीति तेन ಹಿಮಾಲಯ ಪರ್ವತದ ಶಿಖರಗಳ ಮಾಲೆಯನ್ನು ಹೋಲುವ, सुधाधवलित ಸುಣ್ಣದಿಂದ ಶುಭ್ರವಾದ, परिखा ಕಂದಕ, परिवेष्टित ಸುತ್ತುವರಿಯಲ್ಪಟ್ಟ, अमरागार ದೇವತೆಗಳ ಮನೆ.

11–20. जग्राह ಗ್ರಹಿಸಿದನು, ತಿಳಿದುಕೊಂಡನು, ग्रह उपादाने ಲಿಟ್ ತೃತೀಯ ಏಕವಚನ, मणिदर्पणं ರತ್ನದ ಕನ್ನಡಿ, सं+क्रम्, (क्रमु पादविन्यासे) ಲಿಟ್ ತೃತೀಯ ಏಕವಚನ, पदम् ವ್ಯಾಕರಣ ಶಾಸ್ತ್ರ, वाक्यम् ಮೀಮಾಂಸಾ ಶಾಸ್ತ್ರ, प्रमाणम् ನ್ಯಾಯಶಾಸ್ತ್ರ, चापः ಬಿಲ್ಲು, कृपाणः ಕತ್ತಿ, तोमरः ಒಂದು ಆಯುಧ, परशुः ಕೊಡಲಿ, मुरजः ಮೃದಂಗ, दर्दुरपुटः ಕಹಳೆ, पत्रच्छेद्यम् ಕಪೋಲ ಚಿತ್ರಣ, दारुकर्मणि ಮರಗೆಲಸದಲ್ಲಿ.

21–30. सुरधनुः ಇಂದ್ರನ ಧನುಸ್ಸು, पुपोष–पुष पुष्टौ ಧಾತುವಿನ ಲಿಟ್ ತೃತೀಯ ಏಕವಚನ.

---

# ೯. ಸತ್ಯಾಶ್ರಯಃ ಪುಲಿಕೇಶಿ

ಈ ಭಾಗವನ್ನು ಐಹೊಳೆ ಶಿಲಾಶಾಸನದಿಂದ ಆಯ್ದುಕೊಳ್ಳಲಾಗಿದೆ. ಐಹೊಳೆ ಎಂಬ ಗ್ರಾಮವು ಮೈಸೂರು ರಾಜ್ಯದ ಬಿಜಾಪುರ ಜಿಲ್ಲೆಯ ಹುನಗುಂದ ತಾಲ್ಲೂಕಿನಲ್ಲಿ ಮಲಪ್ರಭಾ ನದಿಯ ದಂಡೆಯ ಮೇಲೆ ಇದೆ. ಇದು ಪಶ್ಚಿಮ ಚಾಲುಕ್ಯರ ರಾಜಧಾನಿಯಾಗಿತ್ತು. ಐಯ್ಯಾ-ಪೊಳೆ....ಐಯ್ಯಾ-ವೊಳೆ ಎಂಬ ಹಳೆಯ ಹೆಸರೇ ಈಗ ಐಹೊಳೆ ಎಂದಾಗಿದೆ. ಇಲ್ಲಿ ಚಾಲುಕ್ಯರ ಕಾಲದ ಅನೇಕ ದೇವಾಲಯಗಳೂ, ಐತಿಹಾಸಿಕ ಸ್ಮಾರಕಗಳೂ ಇವೆ. ಇಲ್ಲಿರುವ ಮೇಲುಗುಡಿ (ಮೇಗುಟಿ) ಎಂಬ ದೇವಾಲಯದಲ್ಲಿರುವ ಶಿಲಾಶಾಸನವೇ ಇಲ್ಲಿ ಆರಿಸಿಕೊಂಡ ಐಹೊಳೆ ಶಾಸನ. ಈ ಶಿಲಾಶಾಸನವು 4 ಅಡಿ 11½ ಅಂಗುಲ ಉದ್ದವಾಗಿಯೂ, 2 ಅಡಿ 2 ಅಂಗುಲ ಅಗಲವಾಗಿಯೂ ಇದೆ. ಸಂಸ್ಕೃತದಲ್ಲಿ ಬರೆಯಲ್ಪಟ್ಟ ಈ ಶಾಸನದಲ್ಲಿ 36 ಶ್ಲೋಕಗಳಿವೆ. ಅವುಗಳಲ್ಲಿ ಮುಖ್ಯವಾದ 30 ಶ್ಲೋಕಗಳನ್ನು ಆಯ್ದು ಇಲ್ಲಿ ಕೊಡಲಾಗಿದೆ. ಈ ಶಾಸನದಿಂದ ಪಶ್ಚಿಮ ಚಾಲುಕ್ಯರ ವಂಶಾವಳಿ ಹೀಗೆ ತಿಳಿದುಬರುತ್ತದೆ.

ಈ ವಂಶಾವಳಿಯಲ್ಲಿ ಉಲ್ಲೇಖಿಸಲ್ಪಟ್ಟ 2 ನೆಯ ಪುಲಿಕೇಶಿಯನ್ನು ಈ ಐಹೊಳೆ ಶಾಸನದಲ್ಲಿ ಹೊಗಳಲಾಗಿದೆ. ಈ ಶಾಸನದಲ್ಲಿ ಅನೇಕ ರಾಜರ ಉಲ್ಲೇಖವಿದೆ; ಮತ್ತು ಕಾಲಿದಾಸ ಹಾಗೂ ಭಾರವಿಕವಿಗಳ ಉಲ್ಲೇಖವಿದೆ. ಈ ಶಾಸನವನ್ನು ಬರೆದವನು ರವಿಕೀರ್ತಿ. ಶಾಸನದ ಕಾಲ ಕ್ರಿ. ಶ. 634-635. ಈ ಶಾಸನದಿಂದ ಅನೇಕ ಐತಿಹಾಸಿಕ ಅಂಶಗಳು ತಿಳಿದುಬರುವುದಲ್ಲದೆ, ಇಲ್ಲಿಯ

ಶೈಲಿಯು ಸುಂದರವೂ ಪ್ರೌಢವೂ ಆಗಿದೆ. ಸಂಸ್ಕೃತ ಶಾಸನಸಾಹಿತ್ಯಕ್ಕೆ ಇದೊಂದು ಉತ್ತಮ ನಿದರ್ಶನ.

**1.** वीतजरामरणजन्मनः यस्य ज्ञानसमुद्रान्तर्गतम् अखिलं जगत् अन्तरीपमिव (वर्तते) सः भगवान् जिनेन्द्रः जयति ।

जरा च मरणं च जन्म च जरामरणजन्मानि, वीतानि तानि यस्य सः तस्य ಹುಟ್ಟು, ಸಾವು ಮತ್ತು ಮುಪ್ಪುಗಳಿಂದ ಪಾರಾದ, अन्तरीपं ದ್ವೀಪ.

**2.** तदनु पृथिवीमौलिललाम्नां पुरुषरत्नानां यः प्रभवः सः अपरिमेयः चलुक्यकुलविपुलजलनिधिः चिरं जयति ।

चलुक्यकुलमेव विपुलः जलनिधिः ಚಾಲುಕ್ಯವಂಶವೆಂಬ ವಿಶಾಲವಾದ ಸಾಗರ, पृथिव्याः मौलौ ललामानि तेषां ಪೃಥಿವಿಗೆ ಶಿರೋರತ್ನಪ್ರಾಯವಾದ.

**3.** शूरे विदुषि च दानं मानं च युगपद् एकत्र विभजन् अविहितयथासंख्यः सत्याश्रयः सुचिरं जयति ।

युगपत् (ಅವ್ಯಯ) ಒಟ್ಟಿಗೆ, ಒಂದೇ ಸಲ, न विहितं यथासंख्यं येन सः ಒಂದಾದ ಮೇಲೆ ಒಂದು ಎಂಬ ಕ್ರಮವನ್ನು ಅನುಸರಿಸದೇ ಇದ್ದ.

**4.** वरदातुङ्गतरङ्गविलसद्धंसावलीमेखलां सम्पदा सुरपुरप्रस्पर्धिनीं वनवासीं अवमृद्नतः यस्य महता बलार्णवेन परितः संछादितोर्वीतलं तत् स्थलदुर्गं तत्क्षणे जलदुर्गतामिव गतं, पश्यताम् ।

वरदायाः तुङ्गाः तरङ्गाः एव रङ्गः तस्मिन् विलसन्ती या हंसानां आवली, सैव मेखला यस्याः तां ವರದಾ ನದಿಯ ಉನ್ನತವಾದ ತೆರೆಗಳೆಂಬ ರಂಗಭೂಮಿಯ ಮೇಲೆ ವಿಲಾಸದಿಂದ ಸಂಚರಿಸುತ್ತಿರುವ ಹಂಸಗಳ ಸಾಲುಗಳೆಂಬ ಒಡ್ಯಾಣವಿರುವ, अवमृद्नतः ಸದೆಬಡೆದ, बलार्णवेन ಸೈನ್ಯವೆಂಬ ಸಮುದ್ರದಿಂದ, संछादितं उर्वीतलं यस्य तत् ಭೂ ಪ್ರದೇಶವೆಲ್ಲ ಮುಚ್ಚಿದ.

**5.** यस्य अनुभावोपनताः गङ्गालुपेन्द्राः सप्तव्यसनानि पुरोपार्जितसम्पदोऽपि हित्वा सदा आसन्नसेवामृतपानशौण्डाः आसन् ।

गंगालुपेन्द्राः ಗಂಗ ಮತ್ತು ಆಲುಪ ರಾಜರು, सप्तव्यसनानि—

मृगयाक्षो दिवास्वप्नः परिवादः स्त्रियो मदः ।
तौर्यत्रिकं वृथाट्या च कामजो दशको गणः ।

ಬೇಟೆ, ದ್ಯೂತ, ಹಗಲುನಿದ್ರೆ, ಪರರ ನಿಂದೆ, ಸ್ತ್ರೀಸಮಾಗಮ, ಮದ್ಯಪಾನ ದಿಂದುಂಟಾದ ಮದ, ನೃತ್ಯಗೀತಾದಿಗಳು, ನಿರರ್ಥಕ ಓಡಾಟ ಇವು ಕಾಮ ದಿಂದುಂಟಾಗುವ ವ್ಯಸನಗಳೆಂದು ಮನುವು ಹೇಳಿದ್ದಾನೆ. अनुभावोपनताः ಪ್ರಭಾವದಿಂದ ನಮ್ರರಾಗಿ, आसन्नसेवामृतपानशौण्डाः ಸಮೀಪದಲ್ಲಿದ್ದುಕೊಂಡು ಪರಿಚಾರ ಮಾಡುವುದೆಂಬ ಅಮೃತಪಾನದಿಂದ ಮುದಿತರಾದ.

6. कोङ्कणेषु यदादिष्टचण्डदण्डाम्बुवीचिभिः मौर्यपल्वलाम्बुसमृद्धयः तरसा उदस्ताः ।

चण्डदण्ड ಪುಲಿಕೇಶಿಯ ಸೇನಾಪತಿಯ ಹೆಸರು, येन आदिष्टः चण्डदण्ड एव अम्बुवीचयः ताभिः ಇವನಿಂದ ಆಜ್ಞಾಪಿಸಲ್ಪಟ್ಟ ಚಂಡದಂಡನೆಂಬ ತೆರೆಗಳಿಂದ.

7. यस्य प्रतापोपनताः लाटमालवगुर्जराः दण्डोपनतसामन्तचर्याचार्याः इव अभवन् ।

दण्डेन उपनता या सामन्तचर्या तस्याः आचार्याः ದಂಡೋಪಾಯದಿಂದ ಒದಗಿ ಬಂದ ಸಾಮಂತ ವೃತ್ತಿಯನ್ನು ಅನುಸರಿಸುವುದರಲ್ಲಿ ನಿರತರು.

8. येन अपरिमितविभूतिस्फीतसामन्तसेनामुकुटमणिमयूखाक्रान्तपादारविन्दः हर्षः युधि पतितगजेन्द्रानीकबीभत्सभूतः भयविगलितहर्षः च अकारि ।

अपरिमिता विभूतिः तया स्फीता सामन्तसेना तस्याः मुकुटमणयः तेषां मयूखैः आक्रान्तौ पादारविन्दौ यस्य सः ಅಪಾರವಾದ ಐಶ್ವರ್ಯದಿಂದ ಬೆಳೆದು ನಿಂತ ಸಾಮಂತ ರಾಜರ ಸೇನೆಯಲ್ಲಿದ್ದವರ ಶಿರೋರತ್ನಗಳ ಕಿರಣಗಳಿಂದ ವ್ಯಾಪಿಸಲ್ಪಟ್ಟ ಪಾದಕಮಲಗಳಿರುವ, पतिताः गजेन्द्राः तेषां अनीकं तेन बीभत्सभूतः ನೆಲಕ್ಕುರುಳಿದ ಮದ್ದಾನೆಗಳಿಂದ ಭೀಭತ್ಸಭಾವವನ್ನು ತಾಳಿದ. ಈ ಶ್ಲೋಕದಲ್ಲಿ ಹರ್ಷವರ್ಧನನ ಉಲ್ಲೇಖವಿದೆ.

9. यः विधिवत् उपचिताभिः तिसृभिः अपि शक्तिभिः शक्रकल्पः यः स्वैः माहाकुलाद्यैश्च गुणौघैः नवनवतिसहस्रग्रामभाजां त्रयाणां महाराष्ट्रकाणां अधिपतित्वं अगमत् ।

विधिवत् उपचिताभिः ಕ್ರಮಪೂರ್ವಕವಾಗಿ ಅಭಿವೃದ್ಧಿಗೊಳಿಸಲ್ಪಟ್ಟ, शक्र-कल्पः ಇಂದ್ರನಿಗೆ ಸಮಾನನಾದ, नवनवतिसहस्र ತೊಂಬತ್ತೊಂಬತ್ತು ಸಾವಿರ.

ಇಲ್ಲಿ ಮಹಾರಾಷ್ಟ್ರದ ಉಲ್ಲೇಖವಿದೆ. ಬಹುಶಃ ಇದೇ ಮಹಾರಾಷ್ಟ್ರದ ಪ್ರಾಚೀನವಾದ ಉಲ್ಲೇಖವು.

**10.** स्वगुणैः गृहिणां त्रिवर्गतुङ्गाः विहितान्यक्षितिपालमानभङ्गाः सकोसलाः कलिङ्गाः यदनीकेन उपजातभीतिलिङ्गाः अभवन् ।

त्रिवर्ग ಧರ್ಮಾರ್ಥಕಾಮಗಳು, ಇದರಲ್ಲಿ ಕೋಸಲ ಮತ್ತು ಕಲಿಂಗ ಪ್ರದೇಶದ ಉಲ್ಲೇಖವಿದೆ.

**11.** येन पिष्टं पिष्टपुरं, (येन) दुर्गम् अदुर्गमं जातं, चित्रं यस्य कलेः वृत्तं दुर्गमदुर्गमम् जातम् ।

**12.** शौर्योत्साहरसोद्धतारिमथनैः मौलादिभिः षड्विधैः उद्धतामलचामर-ध्वजशतच्छत्रान्धकारैः बलैः आक्रान्तात्मबलोन्नतिं पल्लवानां पतिं यः बलरजस्सञ्छन्न-काञ्चीपुरप्राकारान्तरितप्रतापम् अकरोत् ।

उद्धूताः अमलाः चामराः ध्वजाश्च तेषां शतं छत्रं तस्यान्धकारः येषां तानि तैः ಹಾರಾಡುತ್ತಿರುವ ನಿರ್ಮಲವಾದ ನೂರಾರು ಚಾಮರ ಮತ್ತು ಧ್ವಜಗಳ ಛತ್ರದ ನೆರಳು ಹಬ್ಬಿರುವ, शौर्यं च उत्साहश्च तयोः रसः तेन उद्धताः अरयः तान् मथ्नन्तीति ಶೌರ್ಯ ಮತ್ತು ಉತ್ಸಾಹಗಳ ಹೆಚ್ಚುವಿಕೆಯಿಂದ ಉದ್ಧತರಾದ ಶತ್ರುಗಳನ್ನು ನಾಶಗೊಳಿಸುವ, आक्रान्ता आत्मबलस्य उन्नतिः यस्य सः तम् ಕುಗ್ಗಿಸಲ್ಪಟ್ಟ ತನ್ನ ಸೈನ್ಯದ ಬಲವಿರುವ.

बलस्य रजसा संछन्नं काञ्चीपुरं तस्य प्राकारे अन्तरितः प्रतापः यस्य सः ಸೈನ್ಯದ ಧೂಳಿನಿಂದ ಮುಚ್ಚಿದ ಕಾಂಚೀನಗರದ ಪ್ರಾಕಾರದಲ್ಲಿಯೂ ಪ್ರತಾಪವನ್ನು ಕಳೆದುಕೊಂಡ.

ಈ ಶ್ಲೋಕದಲ್ಲಿ ಪಲ್ಲವರ ಮತ್ತು ಅವರ ರಾಜಧಾನಿಯಾದ ಕಾಂಚೀಪುರದ ಉಲ್ಲೇಖವಿದೆ.

**13.** चोलानां हतशफरीविलोलनेत्रा कावेरी सपदि जयोद्यतस्य यस्य प्रश्च्यो-तन्मदगजसेतुरुद्धनीरा रत्नराशेः संस्पर्शं परिहरति स्म ।

हताः शफर्यः एव विलोलानि नेत्राणि ಚಂಚಲವಾದ ಮತ್ತು ಹೊಳೆಯುವ ಮೀನುಗಳೇ ಕಣ್ಣುಗಳಾಗಿರುವ, प्रश्च्योतन्तः मदगजा एव सेतुः तेन रुद्धं नीरं यस्याः सा ಮದೋದಕವನ್ನು ಸುರಿಸುತ್ತಿರುವ ಆನೆಗಳೆಂಬ ಸೇತುವೆಗಳಿಂದ

ತಡೆಹಿಡಿದ ನೀರಿರುವ. ಈ ಶ್ಲೋಕದಲ್ಲಿ ಚೋಳದೇಶ ಮತ್ತು ಕಾವೇರಿಯ ಉಲ್ಲೇಖವಿದೆ.

**14.** पल्लवानीकतुहिनेतरदीधितिः यः चोलकेरलपाण्ड्यानां तत्र महर्द्धये अभूत्।

पल्लवानां अनीकं तदेव नीहारः तस्य तुहिनेतरदीधितिः ಪಲ್ಲವರ ಸೈನ್ಯವೆಂಬ ಮಂಜಿಗೆ ಸೂರ್ಯನಂತಿರುವ, तुहिनात् इतराः दीधितयः यस्य सः ಹಿಮಕ್ಕಿಂತ ಭಿನ್ನವಾದ ಅಂದರೆ ಉಷ್ಣವಾದ ಕಿರಣಗಳುಳ್ಳವನು, ಸೂರ್ಯನು.

**15.** समस्ता दिशः जित्वा, महितान् भूमिपतीन् विसृज्य, देवद्विजान् आराध्य, चञ्चन्नीरधिनीलनीरपरिखां एकाम् उर्वीमिव (स्थितां) इमां वातापीं नगरीं प्रविश्य उत्साहप्रभुमन्त्रशक्तिसहिते यस्मिन् सत्याश्रये शासति सति।

चञ्चन् नीरधिः तस्य नीलं यत् नीरं तेन युक्ता परिखा यस्याः सा तां ಹೊಳೆಯುತ್ತಿರುವ ಸಮುದ್ರದಂತೆ ನೀಲವಾದ ನೀರಿನಿಂದ ತುಂಬಿದ ಕಂದಕಗಳಿರುವ, महितान् ಪೂಜ್ಯರಾದ, वातापी ಬಾದಾಮಿ. ಈ ಶ್ಲೋಕದಲ್ಲಿ ಸತ್ಯಾಶ್ರಯ ಪುಲಿಕೇಶಿಯನ್ನು ನಿರ್ದೇಶಿಸಲಾಗಿದೆ.

**16–17.** भारतात् आहवात् इतः सप्ताब्दशतयुक्तेषु त्रिंशत्सु त्रिसहस्रेषु पञ्चसु अब्देषु गतेषु सत्सु।

कलौ काले, शकानाम् भूभुजामपि पञ्चाशत्सु षट्सु पञ्चशतसु च समासु समतीतासु (सत्सु)।

भारताद् आहवाद् इतः ಮಹಾಭಾರತ ಯುದ್ಧವಾದ ಮೇಲೆ, त्रिसहस्रेषु सप्ताब्दशतयुक्तेषु त्रिंशत्सु पञ्चसु अब्देषु गतेषु 3735 ವರ್ಷಗಳಾದ ಮೇಲೆ, कलौ काले ಕಲಿಯುಗವು ಪ್ರಚಲಿತವಿದ್ದಾಗ, शकानामपि भूभुजां ಶಕ ರಾಜರ, पञ्चशतासु पञ्चाशत्सु षट्सु समासु समतीतासु 556 ವರ್ಷಗಳು ಕಳೆದ ಮೇಲೆ.

**18.** अम्बुधित्रयनिवारितशासनस्य तस्य सत्याश्रयस्य परं प्रसादम् आप्तवता मतिमता रविकीर्तिना महिम्नां भवनं शैलं इदं जिनेन्द्रभवनं निर्मापितम्।

ಈ ಶಾಸನವನ್ನು ಬರೆದ ಸಂದರ್ಭವನ್ನು ಈ ಶ್ಲೋಕದಲ್ಲಿ ಹೇಳಿದೆ. ಮೇಲೆ ವರ್ಣಿಸಿದ ಸತ್ಯಾಶ್ರಯನಿಗೆ ಪರಮಾಪ್ತನಾದ ರವಿಕೀರ್ತಿಯು ಈ ಶಾಸನವಿದ್ದ ಜಿನೇಂದ್ರ ಭವನವನ್ನು ನಿರ್ಮಿಸಿದ ಸಂದರ್ಭವನ್ನು ಇಲ್ಲಿ ಉಲ್ಲೇಖಿಸಲಾಗಿದೆ. ಈ ಸಂದರ್ಭವನ್ನು ಉಲ್ಲೇಖಿಸುವುದಕ್ಕಾಗಿಯೇ ಈ ಶಾಸನವನ್ನು ಬರೆಯಲಾಗಿದೆ.

**19.** अस्याः प्रशस्तेः त्रिजगद्गुरोः जिनस्य वसतेः च कर्ता कारयिता चापि कृती स्वयं रविकीर्तिः ।

**20.** कविताश्रितकालिदासभारविकीर्तिः सः रविकीर्तिः विजयताम् ।

ಇಲ್ಲಿ ಈ ಶಾಸನದ ರವಿಕೀರ್ತಿಯು ತಾನು ಕಾಲಿದಾಸ ಹಾಗೂ ಭಾರವಿಯಷ್ಟು ಕಾವ್ಯರಚನೆಯಲ್ಲಿ ಕೀರ್ತಿಯನ್ನು ಗಳಿಸಿದವನು ಎಂದು ಆತ್ಮವಿಶ್ವಾಸವನ್ನು ವ್ಯಕ್ತಗೊಳಿಸಿದ್ದಾನೆ. ಶಾಸನಗಳಲ್ಲಿ ಕಾಲಿದಾಸನ ಉಲ್ಲೇಖವಿರುವುದು ಇದೇ ಶಾಸನದಲ್ಲಿ. ಈ ಶಾಸನದ ಕಾಲ ಮೇಲಿನ 16 ಮತ್ತು 17ನೇ ಶ್ಲೋಕಗಳಲ್ಲಿ ಉಲ್ಲೇಖಿಸದಂತೆ ಕ್ರಿ. ಶ. 634–635 ಇದರಿಂದ ಕಾಲಿದಾಸನ ಕಾಲದ ಉತ್ತರಾವಧಿಯು ಖಚಿತವಾಗುತ್ತದೆ. ಆದ್ದರಿಂದಲೇ ಈ ಶಾಸನವು ತುಂಬ ಮಹತ್ವವನ್ನು ಪಡೆದಿದೆ.

---

## १०. दशरथः रामाभिषेकाय मतिं करोति

ಈ ಭಾಗವನ್ನು ವಿದರ್ಭರಾಜನು ರಚಿಸಿದ ಚಂಪೂರಾಮಾಯಣದ ಅಯೋಧ್ಯಾಕಾಂಡದಿಂದ ಆಯ್ದುಕೊಳ್ಳಲಾಗಿದೆ. ಸಂಸ್ಕೃತದಲ್ಲಿ ಗದ್ಯಪದ್ಯ ಮಿಶ್ರಿತ ವಾದ ಕಾವ್ಯಕ್ಕೆ ಚಂಪೂ ಕಾವ್ಯವೆಂದು ಹೆಸರು.

गद्यपद्यात्मकं काव्यं चम्पूरित्यमिधीयते ಎಂದು ಚಂಪೂ ಕಾವ್ಯದ ಲಕ್ಷಣವು ಹೇಳಲ್ಪಟ್ಟಿದೆ. ಚಂಪೂ ರಾಮಾಯಣವು ಪ್ರಸಿದ್ಧವಾದ ಪಂಚ ಚಂಪೂ ಕಾವ್ಯ ಗಳಲ್ಲಿ ಒಂದು. ಇಲ್ಲಿ ರಾಮಾಯಣದ ಕಥೆಯನ್ನೇ ಚಂಪೂ ಕಾವ್ಯದ ಶೈಲಿಯಲ್ಲಿ ಬರೆಯಲಾಗಿದೆ. ಕಥೆಯಲ್ಲಿ ವ್ಯತ್ಯಾಸವಿಲ್ಲದಿದ್ದರೂ ಕೆಲವು ಘಟನೆಗಳು ವೈಶಿಷ್ಟ್ಯ ಪೂರ್ಣವಾಗಿ ವರ್ಣಿತವಾಗಿವೆ.

ಇಲ್ಲಿ ಅಯೋಧ್ಯಾಕಾಂಡದ ಆರಂಭದಲ್ಲಿ ಬರುವ ದಶರಥನು ಶ್ರೀರಾಮನ ಪಟ್ಟಾಭಿಷೇಕವನ್ನು ಮಾಡಬೇಕೆಂದು ಪುರಪ್ರಮುಖರೊಡನೆ ಆಲೋಚನೆ ಮಾಡಿದ ಭಾಗವನ್ನು ಆಯ್ದುಕೊಡಲಾಗಿದೆ.

**1.** भुजाबलात् भूभुजाम् असुलभां निर्वृतिं गच्छता दशरथेन भरतलक्ष्मणानुजौ मातुलस्य युधाजितः नगरे स्थापितौ ॥

भुजाबलात् ಇಲ್ಲಿ ಬಾಹು ಎಂಬ ಅರ್ಥದಲ್ಲಿ ಆಕಾರಾಂತವಾದ ಭುಜಾ ಶಬ್ದವನ್ನು ಉಪಯೋಗಿಸಲಾಗಿದೆ, निर्वृतिः ಸಂತೋಷ.

**2.** अथ दशरथः स्वतः त्रिजगत्पतिं पुत्रं रामं, भुवनभरणे कल्पं कल्याण-भूधरं आदरात् स्वगृहपटलीधुर्यस्तम्भं विधातुमनाः इव स्वविषयमहीमात्रे पतिं कर्तुं मतिं विदधे ।

स्वविषयमहीमात्रे ತನ್ನ ರಾಜ್ಯಕ್ಕೆ ಒಳಪಟ್ಟ ಭೂ ಪ್ರದೇಶಕ್ಕೆ ಮಾತ್ರ, कल्पम् ಸಮರ್ಥನಾದ, कल्याणभूधरः ಸುವರ್ಣ ಪರ್ವತ, ಮೇರುಪರ್ವತ, स्वगृह-पटलीधुर्यस्तम्भः ತನ್ನ ಮನೆಯ ಮೇಲ್ಛಾವಣಿಯ ಭಾರವನ್ನು ಹೊರುವ ಕಂಬ.

**गद्य** — वृद्धश्रवसः पुरोधाः तस्य समान् ಇಂದ್ರನ ಪುರೋಹಿತನಿಗೆ ಸಮನಾದ, शिवताति ಕಲ್ಯಾಣಕರವಾದ, यशस्समार्जनजागरूकाः ಕೀರ್ತಿಯನ್ನು ಸಂಪಾದಿಸುವುದರಲ್ಲಿ ಎಚ್ಚರವಹಿಸುವ, जनोपतापसम्मार्जनतत्पराः ಜನಗಳ ಕಷ್ಟ

ಗಳನ್ನು ಪರಿಹರಿಸುವುದರಲ್ಲಿ ತತ್ಪರರಾದ, देवभूयं गताः ದೇವತ್ವವನ್ನು ಪಡೆದರು. अभ्युपगम ಅಂಗೀಕೃತವಾದ, निगम ನೀತಿಶಾಸ್ತ್ರಗಳು, प्रतीपगामिनी ಪ್ರತಿಕೂಲ ವಾದ, ವಿರುದ್ಧವಾದ.

**3.** मम सुरनरगीतख्यातिभिः हेतिभिः वा, दिवि भुवि च समानप्रक्रमैः विक्रमैः वा या जरा नियतम् अपरिहार्या सा मदङ्गे विकचकमलषण्डे चन्द्रिकेव आविरासीत् ।

हेतिभिः ಆಯುಧಗಳಿಂದ, विकचकमल षण्डे ಅರಳಿದ ಕಮಲಗಳ ಸಮೂಹದಲ್ಲಿ.

**गद्य**–समस्तस्य क्षत्रवर्गस्य गर्वः, तस्य पाटने वरिष्ठा धारा यस्य सः परश्वधः, तस्य भरणेन भीषणः वेषः यस्य सः तस्य भार्गवस्य भंगात्, परश्वधः ಕೊಡಲಿ, भार्गवः ಪರಶುರಾಮ, अपरिच्छिन्न ಅಪರಿಮಿತ, विश्वंभराभारम् ಪೃಥ್ವಿಯ ಭಾರವನ್ನು प्रावृषेण्यः पयोवाहव्यूहः तस्य स्तनितमेव नादः, तस्य आकर्णनेन समुदीर्णः निरतिशयाह्लादः तस्य संसर्गेण निरर्गलं यथा तथा निर्गलन्त्यः केकाः आलपन्तीति ಮಳೆಗಾಲ ದಲ್ಲಿಯ ಮೋಡಗಳ ರಾಶಿಗಳ ಗರ್ಜನೆಯ ಧ್ವನಿಯನ್ನು ಕೇಳಿ ಉಂಟಾದ ಅತಿಶಯವಾದ ಸಂತೋಷದಿಂದ ನಿರರ್ಗಲವಾಗಿ ಹೊರಸೂಸುವ ಕೇಕಾರವವನ್ನು ಮಾಡುವ, प्रमदभवः कलकलरवः, तेन मुखरितानि हरिन्मुखानि येषां ते ಸಂತೋಷ ದಿಂದುಂಟಾದ ಕಲಕಲನಾದದಿಂದ ದಿಕ್ಕುಗಳನ್ನೆಲ್ಲಾ ಮುಖರಿತವಾಗಿ ಮಾಡಿದ.

**4.** आनन्दबाष्पविसरः प्रजानां वदने अभिषेकदिने भवित्रीं रामस्य कान्तिम् चक्षुः प्रक्षाल्य आदरेण वीक्षितुमिव मकरन्द इव आविर्बभूव ।

बाष्पविसरः ಕಣ್ಣೀರಿನ ಪ್ರವಾಹ, मकरन्दः ಹೂವಿನ ರಸ, भवित्रीम् ಮುಂದೆ ಆಗುವ.

**गद्य**–संपत्स्यमानः महोत्सवः तस्मिन् उत्सुकाः जनाः, तेषां सम्मर्दः, तेन जनिष्यमाणः रजोराजिपातः तस्य परिजिहीर्षया ಮುಂದೆ ಬರುವ ಮಹೋತ್ಸವವನ್ನು ನೋಡಲು ಉತ್ಸುಕವಾದ ಜನರ ಗದ್ದಲದಿಂದುಂಟಾಗುವ ಧೂಳು ಬೀಳುವುದನ್ನು ತಪ್ಪಿಸಿಕೊಳ್ಳಲೋ ಎಂಬಂತೆ, कञ्चुक ನಿಲುವಂಗಿ.

**5.** अनाश्रिततपोवनभूमिभागान् मार्गपरिपालनजागरूकान् अस्मान् उन्मुच्य अम्लानमौग्ध्यं रामम् अचिरात् अवलम्ब्य, एवंविधः जनानुरागः कथमुदेति ?

अम्लानमौग्ध्यं ಇನ್ನೂ ಮುಗ್ಧಭಾವವು ಕಡಿಮೆಯಾಗದೇ ಇದ್ದ.

**6.** देवे स्थिते अपि लोकः तव तनयं रामभद्रं स्वयं भजतु नाम। अत्र किं चित्रम्। तृषितः चकोरः चन्द्रं विना तदुपलम्भनहेतुभूतं क्षीरोदम् आश्रयति किम्।

तृषितः ನೀರಡಿಸಿದ.

**गद्य**–तत्वरे त्वर ಧಾತುವಿನ ಲಿಟ್ ತೃತೀಯ ಪುರುಷ ಏಕವಚನ.

**7.** प्रभुः विनयाभिरामं रामम् आहूय आविः प्रमोदः (सन्) एवम् ऊचे। अह्नाय तिष्ये दिवसे तव उत्तमाङ्गे मकुटं विधातुं यतिष्ये।

आविः प्रमोदः ಸಂತೋಷ ಉಕ್ಕುತ್ತಿರುವ, ऊचे–वच परिभाषणे ಧಾತುವಿನ ಲಿಟ್ ತೃತೀಯ ಏಕವಚನ, उत्तमाङ्गम् ತಲೆ, ಶಿರಸ್ಸು, तिष्ये ಪುಷ್ಯ ನಕ್ಷತ್ರದಲ್ಲಿ.

**8.** मङ्गलतूर्यघोषैः आशावशावल्लभकर्णतालान् आपूरयन् कः अपि गिराम् अभूमिः उन्मस्तकः पौरजनप्रमोदः उज्जृम्भितः।

---

# ११. विश्वगुणादर्शे गुणदोषदृष्टी

ಈ ಭಾಗವನ್ನು ವೆಂಕಟಾಧ್ವರಿ ವಿರಚಿತ ವಿಶ್ವಗುಣಾದರ್ಶ ಚಂಪೂಕಾವ್ಯ ದಿಂದ ಆಯ್ದುಕೊಳ್ಳಲಾಗಿದೆ. ಚಂಪೂ ಕಾವ್ಯಗಳಲ್ಲಿ ವಿಶ್ವಗುಣಾದರ್ಶಚಂಪೂ ಕಾವ್ಯವು ವೈಶಿಷ್ಟ್ಯವುಳ್ಳ ಚಂಪೂ ಕಾವ್ಯವಾಗಿದೆ. ವಿಶ್ವಾವಸು ಮತ್ತು ಕೃಶಾನು ಎಂಬಿಬ್ಬರು ವಿಮಾನದಲ್ಲಿ ಸಂಚರಿಸಿ ಭಾರತ ದೇಶವನ್ನೆಲ್ಲ ಸುತ್ತಿ ನೋಡಿದ ಆಂಧ್ರ, ಕರ್ಣಾಟಕ, ಚೋಳ, ಮಹಾರಾಷ್ಟ್ರ ಇತ್ಯಾದಿ ಪ್ರದೇಶಗಳ, ಅಲ್ಲಿಯ ಜನರ, ಮತ್ತು ವೇದಾಂತಿ, ತಾರ್ಕಿಕ, ಮೀಮಾಂಸಕ, ವೈದಿಕ, ವೈದ್ಯ ಇತ್ಯಾದಿಗಳ ಗುಣದೋಷಗಳ ವಿಮರ್ಶೆಯೇ ಇಲ್ಲಿಯ ಕಾವ್ಯವಸ್ತು. ವಿಶ್ವಾವಸುವು ಗುಣ ಗಳನ್ನೂ, ಕೃಶಾನುವು ದೋಷಗಳನ್ನೂ ಹೇಳುವನು. ಈ ಗುಣದೋಷಗಳು ಅಷ್ಟೇನೂ ಆರೋಪಿತವಲ್ಲ. ಆಯಾ ಪ್ರದೇಶಗಳ ಮತ್ತು ಜನರ ಸ್ವಭಾವಕ್ಕೆ ಅನುಗುಣವಾಗಿಯೇ ಇವೆ. ಕವಿಗೆ ಈ ಎಲ್ಲ ಪ್ರದೇಶಗಳ ಮತ್ತು ಜನರ ಪರಿಚಯವು ಚೆನ್ನಾಗಿಯೇ ಇದ್ದಂತೆ ಕಾಣುತ್ತದೆ. ಈ ಚಂಪೂಕಾವ್ಯದ ಭಾಷೆಯು ಅಷ್ಟೊಂದು ಪ್ರೌಢವೂ ಅಲ್ಲ, ಅಷ್ಟು ಸರಳವೂ ಅಲ್ಲ. ಶೈಲಿಯೂ ಕೂಡ ಅಷ್ಟೊಂದು ಬಂಧುರವೂ ಅಲ್ಲ, ಶಿಥಿಲವೂ ಅಲ್ಲ. ಭಾಷೆಗಿಂತ ವಿಷಯ ನಿರೂಪಣೆಯ ಆಕರ್ಷಣೆಯೇ ಇಲ್ಲಿ ಹೆಚ್ಚಾಗಿದೆ. ಇಲ್ಲಿ ಆಯ್ದುಕೊಂಡ ಭಾಗದಲ್ಲಿ ಸೂರ್ಯನ ವರ್ಣನೆಯಿದೆ ಮತ್ತು ಜ್ಯೋತಿಷಿಗಳ ಗುಣದೋಷಗಳನ್ನು ವಿಮರ್ಶಿಸಲಾಗಿದೆ.

**1.** कदाचित् विश्वावलोकस्पृहया समानवेषं कृशानुविश्वावसुनामधेयं गन्धर्व-युग्मं विमानम् आरुह्य गगने चचार ।

**2.** अकृशासूयः ತುಂಬ ಅಸೂಯೆಯ ಸ್ವಭಾವ ಉಳ್ಳವನು, पुरोभागी ದೋಷೈಕ ದೃಷ್ಟಿಯುಳ್ಳವನು.

अरविन्दबान्धवः ಸೂರ್ಯ.

**3.** कोकः ಚಕ್ರವಾಕ ಪಕ್ಷಿ, बिब्बोकः ವಿಲಾಸ.

**4.** वसुमान् दीनान् पान्थान् आतपान्धान् विधत्ते, अहहा, पृथ्वीं शुष्कां रचयतितराम्, ओषधीश्च शोषयति, क्लान्तिशान्तिप्रदानां कासाराणां विभवं हरति, एवं स्वतः क्रूरस्य अस्य भास्वतः गुणलवकथा का ?

कासारः ರಾಡಿನೀರಿನ ಪ್ರದೇಶ, क्लान्ति ಆಯಾಸ, ದಣಿವು.

**5.** यः घृष्टिभिः वृष्टिम् आरच्य्य जगतः तुष्टिं सरीसर्ष्टि नृणां दृष्टिषु द्राक् पुष्टिं विशिनष्टि, स्थिरं ध्वान्तं पिनष्टि, प्राज्ञानामपवर्गमार्गदं पद्मागृहोल्लासिनं समस्तलोक-सुहृदं द्योभूषणम् अमुं पूषणं कः न स्तौति ?

घृष्टिभिः ಕಿರಣಗಳಿಂದ, सरीसर्ष्टि ಸೃಷ್ಟಿಸುವನು, ध्वान्तं ಕತ್ತಲೆ, अपवर्गः ಮೋಕ್ಷ, द्योभूषणम् ಆಕಾಶಕ್ಕೆ ಅಲಂಕಾರ ಪ್ರಾಯನಾದ.

**6.** बहुतरोत्सर्गापवादात्मभिः कल्लोलैः निबिडे ज्योतिःशास्त्रमहोदधौ कतिपयान् कणान् लब्ध्वा कृतार्थाः इव (वर्तमानाः) इमे दैवज्ञपाशाः गेहं गेहम् अनुप्रविश्य दीर्घायुस्सुतसम्पदादिकथनैः धनिनां मुहुः मोहं कुर्वते ।

उत्सर्गः ಸಾಮಾನ್ಯ ನಿಯಮ, कल्लोल ಅಲೆಗಳು, दैवज्ञपाशः ಅಲ್ಪಜ್ಞನಾದ ಜ್ಯೋತಿಷಿ.

**7.** दैवज्ञपाशः जनानां सद् असद् वा जन्मपत्रं विलिखति, यदि फलति तदानीं आत्मनः दाक्ष्यं दर्शयति, यदि न फलति (तदानीं) लग्नं द्रष्टुः एव मोहम् आह । एवं इह धनं हरति ।

आत्मदाक्ष्यम् ತನ್ನ ದಕ್ಷತೆ.

**8.** पुंसः विधिवशात् प्रमोदे खेदे वा उपनमति सति एवं मया प्रागेव अभिहितमिति मिथ्या कथयति । इष्टानिष्टाकलनपरिहारैकनिरतान् जनान् असौ मेषादीनां परिगणनया एव भ्रमयति ।

उपनमति उपनमत् ಕೃದಂತದ ಸಪ್ತಮೀ ಏಕವಚನ, ಬರಲು, ಬಂದಾಗ.

गद्य—ऐहिकामुष्मिककर्म ಇಹ ಮತ್ತು ಪರದಲ್ಲಿ ಫಲವನ್ನು ಕೊಡುವ ಕರ್ಮಗಳು, मुधा ವ್ಯರ್ಥ.

**9.** एते देहभाजः कर्मणां पंक्तिवेलासु असुखम् अथवा सुखं नियतं भुञ्जते । अहह, तदेव मौहूर्तिकः इह पुरत एव प्राह चेत् ततः अमीषां फलम् अन्ततः किं स्यात् ? कथय ।

**10.** ननु यत्र ज्योतिषज्ञः न अस्ति अत्र दैवं कर्म न सिद्ध्येत्, पित्र्यं च कर्म न सिद्ध्येत्, ताराः न (सिद्ध्येयुः) नवानां ग्रहाणां चाराः तिथ्यादयः वा न (सिद्ध्येयुः) यतः तत्र बुद्धाः न (सन्ति) ।

**11.** भानोः शीतकरस्य वा अपि भुजगग्रासे पुरः निश्चिते सति तापत्रयोच्चाटनम् तीर्थानाम् अटनं जनस्य सम्पादयेत् । इष्टे प्राक् अवधारिते सति धृतेः तुष्टेः च लाभः भवेत् । व्यसने दृष्टे तु अत्र तत्परिहृतिः जपाद्यैः कर्तुं क्षमा ।

भुजगग्रास ಗ್ರಹಣ, अविस्रंभ ಅವಿಶ್ವಾಸ.

**12.** कुमुदसहृदः वृद्धिह्रासौ, पुष्पवन्तोपरागः, शुक्रादीनाम् उदयविलयौ इति अमी सर्वदृष्टाः । अत्र कुम्भीपुलाकन्यायात् ज्योतिर्नयगतिविदां अखिलवचनेषु निश्चलं मानभावम् आविष्कुर्वन्ति ।

पुष्पवन्तोपरागः ಸೂರ್ಯ ಗ್ರಹಣ ಮತ್ತು ಚಂದ್ರಗ್ರಹಣ, कुम्भी-पुलाकन्यायः ಕವಿಯು "ಸ್ಥಾಲೀ ಪುಲಾಕ ನ್ಯಾಯ"ವನ್ನು 'ಕುಂಭೀಪುಲಾಕ ನ್ಯಾಯ' ಎಂದು ಕರೆದಿದ್ದಾನೆ. कुम्भ ಅನ್ನದ ಪಾತ್ರೆ, पुलाक ಅನ್ನದ ಒಂದು ಅಗಳು. ಅನ್ನದ ಒಂದು ಅಗಳಿನ ಪರೀಕ್ಷೆಯಿಂದ ಇಡೀ ಪಾತ್ರೆಯಲ್ಲಿಯ ಅನ್ನವು ಬೆಂದಿದೆ ಎಂದು ತಿಳಿದುಕೊಳ್ಳುವಂತೆ ಜ್ಯೋತಿಷಿಗಳು ಹೇಳುವ ಕೆಲವು ಅಂಶಗಳು ಗ್ರಹಣ, ಚಂದ್ರೋದಯ, ಶುಕ್ರೋದಯವೆಂಬುದು ಕಂಡುಬರುವುದರಿಂದ ಅವರು ಹೇಳುವ ಇನ್ನಿತರ ವಿಷಯಗಳನ್ನೂ ನಂಬಬಹುದು ಎಂದು ಕವಿಯು ಹೇಳುತ್ತಾನೆ.

**13.** सुबुद्धिः विदैवज्ञं ग्रामं, विबुधविधुरां भूपतिसभां, श्रुत्या हीनं मखं, मनुजपतिशून्यं विषयं च, अनाचारान् दारान्, अपहरिकथं काव्यमपि च, प्रवक्तृत्वापेतं गुरुमपि परिहरेत् ।

विबुधविधुरा ವಿದ್ವಾಂಸರಿಲ್ಲದ, अपहरिकथं ಹರಿಯ ಕಥೆಯಿಲ್ಲದ, प्रवक्तृत्वापेत ವಾಗ್ಮಿತೆಯಿಲ್ಲದ.

---

# १२. यक्षसन्देशः

ಈ ಭಾಗವನ್ನು ಮಹಾಕವಿ ಕಾಲಿದಾಸನ ಮೇಘಸಂದೇಶದಿಂದ ಆಯ್ದು ಕೊಳ್ಳಲಾಗಿದೆ. ಮೇಘಸಂದೇಶವು ಕುಬೇರನ ಶಾಪದಿಂದ ಪ್ರಿಯತಮೆಯನ್ನು ಅಗಲಿದ ಓರ್ವ ಯಕ್ಷನು ಅಲಕಾನಗರಿಯಲ್ಲಿದ್ದ ತನ್ನ ಪ್ರಿಯತಮೆಗೆ ರಾಮಗಿರಿ ಯಲ್ಲಿಯ ತನ್ನ ಆಶ್ರಮದಿಂದ ಮೇಘದ ಮುಖಾಂತರ ಕಳುಹಿಸಿಕೊಟ್ಟ ಸಂದೇಶ ವನ್ನು ವರ್ಣಿಸುವ ಖಂಡಕಾವ್ಯ. ಈ ಕಾವ್ಯದ ಪೂರ್ವಾರ್ಧದಲ್ಲಿ ರಾಮಗಿರಿಯಿಂದ ಅಲಕಾನಗರಿಯವರೆಗೆ ಮೇಘವು ಕ್ರಮಿಸಬೇಕಾದ ಮಾರ್ಗದ ಸುಂದರವಾದ ವರ್ಣನೆ ಇದೆ. ಉತ್ತರಾರ್ಧದಲ್ಲಿ ಅಲಕಾನಗರಿಯ, ಯಕ್ಷನ ಮನೆಯ ಮತ್ತು ಅವನ ಪ್ರಿಯತಮೆಯ ವರ್ಣನೆ ಇದೆ. ಯಕ್ಷನು ಕಳುಹಿಸಬೇಕೆಂದಿದ್ದ ಸಂದೇಶವು ಕಾವ್ಯದ ಕೊನೆಗೆ ಬಂದಿದೆ. ಈ ಭಾಗವನ್ನು ಇಲ್ಲಿ ಆಯ್ದುಕೊಡಲಾಗಿದೆ. ಮೇಘಸಂದೇಶವು ವಿಪ್ರಲಂಭ ಶೃಂಗಾರರಸವನ್ನು ಚಿತ್ರಿಸುವ ಅತ್ಯುತ್ತಮ ಸಂದೇಶ ಕಾವ್ಯ. ಈ ಕಾವ್ಯದ ಮಾದರಿಯಮೇಲೆ ಮುಂದೆ ಅನೇಕ ಸಂದೇಶ ಕಾವ್ಯಗಳು ಬರೆಯಲ್ಪಟ್ಟವೆ. ರಾಮಾಯಣದಲ್ಲಿ ಬಂದ ಹನುಮತ್ಸಂದೇಶದಿಂದ ಕವಿಯು ಈ ಕಾವ್ಯವನ್ನು ಬರೆಯಲು ಸ್ಫೂರ್ತಿಯನ್ನು ಪಡೆದಿರಬಹುದೆಂದು ವಿದ್ವಾಂಸರು ಊಹಿಸಿದ್ದಾರೆ.

**1.** हे आयुष्मन् मम वचनात् आत्मनः उपकर्तुंच ताम् एवं ब्रयाः, अबले तव सहचरः रामगिर्याश्रमस्थः (सन्) अव्यापन्नः, वियुक्तः (सः) त्वां कुशलं पृच्छति। सुलभविपदां प्राणिनाम् एतदेव पूर्वाभाष्यम्।

अव्यापन्नः ಮೃತನಾಗಿಲ್ಲ, पूर्वं आभाष्यम् ಮೊದಲು ವಿಚಾರಿಸತಕ್ಕದ್ದು.

**2.** दूरवर्ती वैरिणा विधिना रुद्धमार्गः (सः) तनुना गाढतप्तेन सास्रेण उत्कण्ठितेन समधिकतरोच्छ्वासिना अङ्गेन प्रतनु तप्तं अश्रुद्रुतं अविरतोत्कण्ठम् उष्णोच्छ्वासं अङ्गं तैः सङ्कल्पैः विशति।

रुद्धमार्गः—रुद्धः मार्गः यस्य सः ಪ್ರತಿಬಂಧಿಸಲ್ಪಟ್ಟ, तनुः ಕೃಶವಾದ, अश्रुद्रुतम् ಕಣ್ಣೀರಿನಿಂದ ಒದ್ದೆಯಾದ.

**3.** (हे अबले) यः ते सखीनां पुरस्तात् आननस्पर्शलोभात् शब्दाख्येयं यदपि कर्णे कथयितुं लोलः अभूत् किल, श्रवणविषयमतिक्रान्तः लोचनाभ्यामदृश्यः सः त्वां उत्कण्ठाविरचितपदं मन्मुखेन इदम् आह।

श्रवणविषयमतिक्रान्तः ಮಾತು ಕೇಳಿಸಿಕೊಳ್ಳಲು ಹತ್ತಿರವಿಲ್ಲದ, आह ಹೇಳಿದನು, ब्रूञ् व्यक्तायां वाचि–ಧಾತುವಿನ ಲಿಟ್ ತೃತೀಯ ಏಕವಚನ.

**4.** श्यामासु अङ्गं, चकितहरणीप्रेक्षणे दृष्टिपातम्, शशिनि वक्त्रच्छायां, शिखिनां बर्हभारेषु केशान्, प्रतनुषु नदीवीचिषु भ्रूविलासान् उत्पश्यामि। हन्त! (हे) चण्डि क्वचिदपि ते सादृश्यं नास्ति।

श्यामासु ಪ್ರಿಯಂಗು ಬಳ್ಳಿಗಳಲ್ಲಿ, चकितानां हरिणीनां प्रेक्षणं तस्मिन् ಗಾಬರಿಗೊಂಡ ಜಿಂಕೆಗಳ ಕಣ್ಣುಗಳಲ್ಲಿ, वक्तृच्छाया ಮುಖದ ಕಾಂತಿ, शिखिनाम् ನವಿಲುಗಳ, बर्हभारेषु ಗರಿಗಳ ರಾಶಿಗಳಲ್ಲಿ, प्रतनुषु ಕ್ಷೀಣವಾದ, नदीवीचिषु ನದಿಗಳ ಅಲೆಗಳಲ್ಲಿ, चण्डि ಕೋಪದ ಸ್ವಭಾವದವಳೇ.

**5.** (हे प्रिये) प्रणयकुपितां त्वां धातुरागैः शिलायाम् आलिख्य आत्मानं ते चरणपतितं कर्तुं यावदिच्छामि, तावत् मुहुः उपचितैः अस्रैः मे दृष्टिः आलुप्यते। क्रूरः कृतान्तः तस्मिन्नपि नौ सङ्गमं न सहते।

धातुरागैः ಕೆಂಪುಮಟ್ಟಿಕಲ್ಲುಗಳ ಬಣ್ಣಗಳಿಂದ, आलुप्यते ಆವರಿಸಲ್ಪಡುತ್ತದೆ, उपचितैः ಹೆಚ್ಚಾದ, अस्रैः ಕಣ್ಣೀರುಗಳಿಂದ.

**6.** स्वप्नसन्दर्शनेषु मया कथमपि लब्धायाः ते निर्दयाश्लेषहेतोः आकाशे प्रणिहितभुजं मां पश्यन्तीनां स्थलीदेवतानां मुक्तास्थूलाः अश्रुलेशाः तरुकिसलयेषु बहुशः न पतन्ति न खलु।

निर्दयाश्लेषः ಗಾಢಾಲಿಂಗನವು, आकाशप्रणिहितभुजम् ಬಯಲಿನಲ್ಲಿ ತೋಳುಗಳನ್ನು ಚಾಚಿದ, अश्रुलेशाः ಕಣ್ಣೀರಿನ ಹನಿಗಳು.

**7.** ननु (प्रिये) बहु विगणयन् आत्मानं आत्मना एव अवलम्बे, तत् (हे) कल्याणि त्वमपि नितरां कातरत्वं मा गमः, कस्य एकान्तं सुखम् उपनतम्, एकान्ततः दुःखं वा उपनतम्, दशा चक्रनेमिक्रमेण नीचैः उपरि च गच्छति।

मा गमः—न माङ् योगे ಎಂಬ ಸೂತ್ರದಿಂದ ಭೂತಕಾಲದಲ್ಲಿ ಉಪಯೋಗಿಸಲ್ಪಡುವ ಅಡಾಗಮವು मा ಪ್ರಯೋಗ ಬಂದಲ್ಲಿ ಬರುವುದಿಲ್ಲ. एकानतः ನಿಯಮಿತವಾದ, ಯಾವಾಗಲೂ, चक्रनेमिक्रमेण ಗಾಲಿಯ ಹಲ್ಲುಗಳಂತೆ.

**8.** शार्ङ्गपाणौ भुजगशयनात् उत्थिते (सति) मे शापान्तः (भविष्यति)। शेषान् चतुरः मासान् लोचने मीलयित्वा गमय। पश्चात् आवां विरहगणितं तं तं आत्माभिलाषं परिणतशरच्चन्द्रिकासु क्षपासु निर्वेक्ष्यावः।

शार्ङ्गं पाणौ यस्य सः-शार्ङ्गपाणिः ವಿಷ್ಣು, भुजगशयनात् ಶೇಷನ ಹಾಸಿಗೆಯಿಂದ, परिणताः शरच्चन्द्रिकाः यासां तासु ಶರತ್ಕಾಲದ ಬೆಳದಿಂಗಳು ತುಂಬಿ ಸೂಸುವ, क्षपासु ರಾತ್ರಿಗಳಲ್ಲಿ, निर्वेक्ष्यावः ಅನುಭವಿಸೋಣ, निर् + विश् प्रवेशने ಧಾತುವಿನ ಲೃಟ್ ಪ್ರಥಮ ಪುರುಷ ಬಹುವಚನ.

**9.** प्रथमविरहोदग्रशोकां ते सखीं एवं आश्वास्य त्रिनयनवृषोत्खातकूटात् शैलात् आशु निवृत्तः सन् साभिज्ञानं प्रहितकुशलैः तद्वचोभिः मम अपि प्रातः कुन्दप्रसव-शिथिलं जीवितं धारयेथाः ।

त्रिनयनस्य वृषः तेन उत्खाताः कूटाः यस्य सः तस्मात् ಮುಕ್ಕಣ್ಣನ ಎತ್ತಿನಿಂದ ಕಿತ್ತೊಗೆಯಲ್ಪಡುವ ಶಿಖರಗಳಿರುವ, प्रथमविरहेण उदग्रः शोकः यस्याः ताम् ಮೊದಲನೆಯ ವಿರಹವಾದ್ದರಿಂದ ತುಂಬ ಶೋಕತಪ್ತಳಾದ, आशु (ಅವ್ಯಯ) ಬೇಗನೆ, कुन्दप्रसवशिथिलम् ಕುಂದದ ಹೂವಿನಷ್ಟು ಶಿಥಿಲವಾದ.

**10.** (हे) जलद सौहार्दाद्वा, विधुरः इति वा, मयि अनुक्रोशबुद्ध्या वा अनुचितप्रार्थनावर्तिनः मे एतत् प्रियं कृत्वा प्रावृषा सम्भृतश्रीः इष्टान् देशान् विचर । एवं क्षणमपि ते विद्युता विप्रयोगः च माभूत् ।

अनुचितप्रार्थनावर्तिनः ನಿನಗೆ ಕೇಳಿಕೊಳ್ಳಲು ಅಷ್ಟೊಂದು ಉಚಿತವಲ್ಲದ ಪ್ರಾರ್ಥನೆಯಿಂದ ನಿನ್ನನ್ನು ನಿರ್ಬಂಧಪಡಿಸುತ್ತಿರುವ, विधुरः ವಿರಹಿತನಾದವನು, अनुक्रोशबुद्ध्या ಅನುಕಂಪದಿಂದ, प्रावृषा संवृतश्रीः ಮಳೆಗಾಲದಿಂದ ಹೆಚ್ಚಿದ ಸೌಂದರ್ಯವುಳ್ಳ, विप्रयोगः ವಿರಹ.

---

# १३. सुजनपद्धतिः

ಈ ಭಾಗವನ್ನು ಭರ್ತೃಹರಿಯ ನೀತಿಶತಕದಿಂದ ಆಯ್ದುಕೊಳ್ಳಲಾಗಿದೆ. ಶೃಂಗಾರ, ವೈರಾಗ್ಯ, ನೀತಿ ಎಂಬ ಶತಕತ್ರಯಗಳಲ್ಲಿ ಒಂದಾದ ನೀತಿಶತಕದಲ್ಲಿ ಮನುಷ್ಯಸ್ವಭಾವದ ಮಾರ್ಮಿಕವಾದ ವಿಶ್ಲೇಷಣೆ ಇದೆ. ಮೂರ್ಖರಿಗೆ ಬುದ್ಧಿಯನ್ನು ಹೇಳುವುದರ ಅಶಕ್ಯತೆ, ವಿದ್ಯೆಗಿರುವ ಗೌರವ, ಸಜ್ಜನ ಮತ್ತು ದುರ್ಜನರಲ್ಲಿಯ ಸ್ವಭಾವದಲ್ಲಿಯ ಸಾಮ್ಯ-ವೈಷಮ್ಯ, ಸ್ವಾಭಿಮಾನ ಇತ್ಯಾದಿ ವಿಷಯಗಳನ್ನು ಕುರಿತು ಸುಂದರವಾದ ಪದ್ಯಗಳಿವೆ. ಓದುವವರ ವಿವೇಕ ಮತ್ತು ಚಾರಿತ್ರ್ಯದ ಅಭಿವೃದ್ಧಿಗೆ ಸಹಾಯಕವಾಗುವ ಹಾಗೂ ಮನುಷ್ಯ ಸ್ವಭಾವವನ್ನು ತಿಳಿದುಕೊಳ್ಳಲು ಸಹಾಯಕವಾಗುವ ಅನೇಕ ಮಾತುಗಳಿವೆ. ಇಲ್ಲಿ ಸಜ್ಜನರ ಸ್ವಭಾವವನ್ನು ಚಿತ್ರಿಸುವ ಸುಜನ ಪದ್ಧತಿಯನ್ನು ಕೊಡಲಾಗಿದೆ.

**1.** सज्जनसंगमे वाञ्छा, परगुणे प्रीतिः, गुरौ नम्रता, विद्यायां व्यसनं, स्वयोषिति रतिः, लोकापवादात् भयम्, शूलिनि भक्तिः, आत्मदमने शक्तिः, खले संसर्गमुक्तिः, (इति) एते निर्मलगुणाः येषु वसन्ति तेभ्यो नरेभ्यो नमः ।

वाञ्छा ಅಭಿಲಾಷೆಯು, ಇಚ್ಛೆಯು, व्यसनं ಆಸಕ್ತಿ, स्वयोषिति ತನ್ನ ಹೆಂಡತಿಯಲ್ಲಿ, आत्मदमने ತನ್ನನ್ನು ತಾನು ಸ್ವಾಧೀನದಲ್ಲಿಟ್ಟುಕೊಳ್ಳುವ ವಿಷಯದಲ್ಲಿ, संसर्गमुक्तिः ಸಂಪರ್ಕ ಬಿಡುವುದು.

**2.** विपदि धैर्यम्, अथ अभ्युदये क्षमा, सदसि वाक्पटुता, युधि विक्रमः, यशसि च अभिरुचिः, श्रुतौ व्यसनं, (इति) इदं हि महात्मनां प्रकृतिसिद्धम् ।

सदसि ಸಭೆಯಲ್ಲಿ, युधि ಯುದ್ಧದಲ್ಲಿ, अभिरुचिः ಆಸಕ್ತಿ, श्रुतौ ಶಾಸ್ತ್ರಾಭ್ಯಾಸದಲ್ಲಿ, प्रकृतिसिद्धं ಸ್ವಭಾವಸಿದ್ಧವಾದುದು.

**3.** न्याय्या वृत्तिः प्रिया, असुभङ्गे अपि मलिनम् असुकरम्, असन्तः तु नाभ्यर्थ्याः, सुहृदपि कृशधनः न याच्यः, विपदि उच्चैः धैर्यम्, महतां च अनुविधेयं पदम्, (इति) इदं विषमम् असिधाराव्रतं सतां केन उद्दिष्टम् ।

असुभंगेऽपि ಪ್ರಾಣಕ್ಕೆ ಅಪಾಯವು ಉಂಟಾಗುವ ಸಂದರ್ಭ ಒದಗಿದಾಗಲೂ, अनुविधेयम् ಅನುಸರಿಸುವಿಕೆಯು, असिधाराव्रतम् ಖಡ್ಗದ ಅಲುಗಿನ ಮೇಲೆ ಸಂಚರಿಸುವಷ್ಟು ಕಠೋರವಾದ ವ್ರತವು.

**4.** प्रच्छन्नं प्रदानम्, गृहमुपगते संभ्रमविधिः, प्रियं कृत्वा मौनम्, सदसि उपकृतेः अपि कथनं च, लक्ष्म्यां अनुत्सेकः, निरभिभवसाराः परकथाः, (इति) इदं विषमम् असिधाराव्रतं सतां केन उद्दिष्टम् ।

अनुत्सेकः ಅಹಂಕಾರವಿಲ್ಲದೆ ಇರುವುದು.

**5.** करे श्लाघ्यः त्यागः, शिरसि गुरुपादप्रणयिता, मुखे सत्या वाणी, भुजयोः अतुलं विजयि वीर्यम्, हृदि स्वच्छा वृत्तिः, श्रवणयोः च अधिगतं श्रुतम्, (इति) इदम् ऐश्वर्येण विनापि प्रकृतिमहतां मण्डनम्।

प्रकृतिमहतां ಸ್ವಭಾವತಃ ದೊಡ್ಡವರಾದವರಿಗೆ, मण्डनं ಅಲಂಕಾರವು.

**6.** प्राणाघातात् निवृत्तिः, परधनहरणे संयमः, काले सत्यवाक्यं, शक्त्या प्रदानं, युवतिजनकथामूकभावः, परेषां तृष्णास्रोतोविभङ्गः, गुरुषु च विनयः, सर्वभूतानुकम्पा, सर्वशास्त्रेषु अनुपहतविधिः (इति) एषः श्रेयसां पन्थाः।

तृष्णास्रोतोविभंगः ಲೋಭದ ಪ್ರವಾಹವನ್ನು ತಡೆಗಟ್ಟುವುದು, अनुपहतविधिः ವಿಹಿತವಾದುದಕ್ಕೆ ವಿರುದ್ಧವಲ್ಲದ.

**7.** संपत्सु महतां चित्तं उत्पलकोमलं भवति। आपत्सु च महाशैलशिलासंघातकर्कशम् (भवति)।

ಇದೇ ಅಭಿಪ್ರಾಯವನ್ನು ತನ್ನ "ಉತ್ತರರಾಮಚರಿತ್ರ"ದಲ್ಲಿ ಭವಭೂತಿಯು ಹೀಗೆ ವ್ಯಕ್ತಪಡಿಸಿರುವನು— वज्रादपि कठोराणि मृदूनि कुसुमादपि।
लोकोत्तराणां चेतांसि कोहि विज्ञातुमर्हति ॥

**8.** संतप्तायसि संस्थितस्य पयसः नामापि न श्रूयते, तत् एव नलिनीपत्रस्थितं मुक्ताकारतया दृश्यते, तत् (एव) अन्तःसागरशुक्तिमध्यपतितं मौक्तिकं जायते, (अतः) प्रायेण अधममध्यमोत्तमजुषां एवंविधाः वृत्तयः।

सन्तप्तायसि ಕಾಯ್ದ ಕಬ್ಬಿಣದ ಮೇಲೆ.

**9.** यः सुचरितैः पितरं प्रीणयेत् सः पुत्रः, यत् भर्तुः हितम् इच्छति तदेव कलत्रम्, यत् आपदि सुखे च समक्रियं तत् मित्रम्, एतत् त्रयं जगति पुण्यकृतः लभन्ते।

कलत्रं ಹೆಂಡತಿ.

**10.** नम्रत्वेन उन्नमन्तः, परगुणकथनैः स्वान् गुणान् ख्यापयन्तः, स्वार्थान् सम्पादयन्तः, परार्थे विततपृथुतरारम्भयत्नाः, क्षान्त्यैव आक्षेपरूक्षाक्षरमुखरमुखान् दुर्जनान् दुःखयन्तः सन्तः साश्चर्यचर्याः जगति बहुमताः, कस्य नाभ्यर्चनीयाः?

विततपृथुतरारम्भयत्नाः ತುಂಬ ಪ್ರಯತ್ನವನ್ನು ಮಾಡುವವರು.

# १४. अन्योक्तयः

ಈ ಭಾಗವನ್ನು ಜಗನ್ನಾಥ ಪಂಡಿತನ ಭಾಮಿನೀವಿಲಾಸದ ಪ್ರಾಸ್ತಾವಿಕ ವಿಲಾಸದಿಂದ ಆಯ್ದುಕೊಡಲಾಗಿದೆ. ಅನ್ಯೋಕ್ತಿ ಎನ್ನುವುದು ಸಂಸ್ಕೃತದಲ್ಲಿ ಒಂದು ವಿಶಿಷ್ಟವಾದ ನಿರೂಪಣೆ. ಕವಿ, ವಿದ್ವಾಂಸ, ದಾನಿ, ಆಶ್ರಯದಾತ, ದುರ್ಜನ ಇತ್ಯಾದಿಗಳನ್ನು ವರ್ಣಿಸಬೇಕೆಂದಿದ್ದಾಗ ಅವರನ್ನು ಪ್ರತ್ಯಕ್ಷವಾಗಿ ನಿರ್ದೇಶಿಸದೆ ಹಂಸ, ಕೋಗಿಲೆ, ಆನೆ, ಸಿಂಹ ಇತ್ಯಾದಿಗಳನ್ನು ಉದ್ದೇಶಿಸಿ ಅವುಗಳ ಮತ್ತು ಅವುಗಳೊಡನೆ ವ್ಯವಹರಿಸುವವರ ಗುಣದೋಷಗಳನ್ನು ಹೇಳಿದಂತೆ ಮಾಡಿ ಅವರ ಗುಣದೋಷಗಳನ್ನು ಎತ್ತಿ ತೋರಿಸುವುದು ಅನ್ಯೋಕ್ತಿಯು. ಇಂತಹ ಅನ್ಯೋಕ್ತಿಗಳನ್ನು ಸಂಸ್ಕೃತದಲ್ಲಿ ಅನೇಕ ಕವಿಗಳು ರಚಿಸಿದ್ದರೂ ಪಂಡಿತರಾಜ ಜಗನ್ನಾಥನದು ಇದರಲ್ಲಿ ಎತ್ತಿದ ಕೈ. ಆದುದರಿಂದ ಅವನ ಕೆಲವು ಶ್ರೇಷ್ಠವಾದ ಅನ್ಯೋಕ್ತಿಗಳನ್ನು ಇಲ್ಲಿ ಕೊಡಲಾಗಿದೆ.

**1.** मदमलिनगण्डाः करटिनः दिगन्ते श्रूयन्ते, करिण्यः कारुण्यास्पदं, मृगाः असमशीलाः, अस्मिन् लोके अनुपमशिखानां नखानां पाण्डित्यं पुनः कस्मिन् प्रकटयतु ?

करटिनः ಮದ್ದಾನೆಗಳು, करिणी ಹೆಣ್ಣಾನೆ, अनुपमाः शिखाः येषां ते तेषां ಹರಿತವಾದ ತುದಿಯುಳ್ಳ. ಇದು ಸಿಂಹಾನ್ಯೋಕ್ತಿಯು. ಅಂದರೆ ಸಿಂಹವನ್ನು ನಿಮಿತ್ತವಾಗಿಟ್ಟುಕೊಂಡು ಪರಾಕ್ರಮಿಯನ್ನು ಕುರಿತು ಹೇಳಿದ ಮಾತು.

'ದಿಗ್ಗಜಗಳು ತಮ್ಮ ತಮ್ಮ ದಿಕ್ಕುಗಳನ್ನು ಬಿಟ್ಟು ಭಯದಿಂದ ಹೊರಗೇ ಬರುವುದಿಲ್ಲ. ಅವು ಅಲ್ಲಿ ಇರುವುದು ಮಾತ್ರ ಕೇಳಿಬರುತ್ತದೆ. ಹೆಣ್ಣಾನೆಗಳೋ ಹೆಣ್ಣಾದ್ದರಿಂದ ಕರುಣೆಗೆ ಅರ್ಹವಾದವುಗಳು. ಜಿಂಕೆಗಳು ಸಮಾನಯೋಗ್ಯತೆಯುಳ್ಳವಲ್ಲ. ಅಂದಮೇಲೆ ಸಿಂಹವು ಈ ಲೋಕದಲ್ಲಿ ಹರಿತವಾದ ತನ್ನ ಉಗುರುಗಳ ಕೌಶಲ್ಯವನ್ನು ಯಾರಮೇಲೆ ತೋರಿಸಬೇಕು, ಎಂದು ಸಿಂಹವನ್ನು ವರ್ಣಿಸಿದಂತೆ ತೋರುವ ಈ ಪದ್ಯದಲ್ಲಿ ದಿಗ್ಗಜಗಳಂತೆ ಪರಾಕ್ರಮಿಗಳೆಂದು ಹೇಳಿಕೊಳ್ಳುವವರು ದಿಕ್ಕಾಪಾಲಾಗಿದ್ದಾರೆ. ಹೆಣ್ಣಾನೆಗಳಂತೆ ದುರ್ಬಲರಾದವರು ಕರುಣೆಗೇ ಅರ್ಹರು. ಮೃಗದಂತೆ ಸೌಮ್ಯಸ್ವಭಾವದವರು ಸಮಾನವಾದ ಯೋಗ್ಯತೆಯುಳ್ಳವರಲ್ಲ. ಆದ್ದರಿಂದ ಈ ಪರಾಕ್ರಮಿಯು ತನ್ನ ಶಸ್ತ್ರಕೌಶಲ್ಯವನ್ನು ಯಾರಮೇಲೆ ತೋರಿಸಬೇಕು ಎಂಬುದು ಇಲ್ಲಿ ಸಿಂಹಾನ್ಯೋಕ್ತಿಯಿಂದ

ಸೂಚಿಸಲ್ಪಟ್ಟಿದೆ. ಈ ಅನ್ಯೋಕ್ತಿಯನ್ನು ಕವಿಗೆ ಅನ್ವಯಿಸಿದಂತೆಯೂ ವಿವರಿಸಬಹುದು. ತನ್ನ ಕಾವ್ಯಪ್ರೌಢಿಮೆಯ ವಿಷಯದಲ್ಲಿ ಅಭಿಮಾನವನ್ನು ತಾಳಿದ ಜಗನ್ನಾಥನು, ಈ ಸಿಂಹಾನ್ಯೋಕ್ತಿಯ ಮೂಲಕ ಈ ರೀತಿ ಸೂಚಿಸುತ್ತಾನೆ :—

ಮದ್ದಾನೆಯಂತೆ ಪಾಂಡಿತ್ಯಾಭಿಮಾನವುಳ್ಳ ಕೆಲ ಕವಿಗಳು ನನ್ನ ಕಾವ್ಯ ಪ್ರೌಢಿಮೆಗೆ ಅಂಜಿ ದಿಕ್ಪಾಲಾಗಿದ್ದಾರೆ. ಇನ್ನು ಕೆಲವು ಕವಿಗಳು ಸ್ತ್ರೀಯರಂತೆ ಕರುಣಾರ್ಹರು. ಮತ್ತೆ ಕೆಲವರು ಸಮಾನಯೋಗ್ಯತೆಯುಳ್ಳವರಲ್ಲ. ಆದ್ದರಿಂದ ಕವಿಸಿಂಹನಾದ ನಾನು ನನ್ನ ಕಾವ್ಯರಚನೆಯ ವೈಖರಿಯನ್ನು ಯಾರಮೇಲೆ ತೋರಿಸಲಿ ಎಂದು ಸಿಂಹಾನ್ಯೋಕ್ತಿಯ ಮೂಲಕ ಕವಿಯು ಸೂಚಿಸಿದ್ದಾನೆ.

**2.** पुरा मानसे सरसि विकचसारसालिस्खलत्परागसुरभीकृते पयसि यस्य वयः यातं, सः मरालकुलनायकः मिलदनेकभेकाकुले पल्वलजले अधुना कथं वर्ततां, रे कथय।

विकचानि सारसानि तेषां आलिः, तस्याः सकाशात् स्खलन् परागः तेन सुरभीकृते ಅರಳುವ ಕಮಲಗಳ ಸಾಲುಗಳಿಂದ ಉದುರುವ ಪುಷ್ಪಧೂಳಿಯಿಂದ ಸುವಾಸನೆಗೊಳಿಸಲ್ಪಟ್ಟ, पल्वल ಕೊಚ್ಚೆನೀರು, मिलन्त अनेके भेकाः, तैः आकुलाः, भेकाः ಕಪ್ಪೆಗಳು, मरालानां कुलं तस्य नायकः, मरालाः ಹಂಸಗಳು.

ಇದು ಹಂಸಾನ್ಯೋಕ್ತಿಯು. ಹಿಂದೆ ಮಾನಸ ಸರೋವರದಲ್ಲಿ ವಾಸಿಸಿದ ಹಂಸವು ಈಗ ಕೊಚ್ಚೆನೀರಿನಲ್ಲಿ ಹೇಗೆ ವಾಸಿಸಬೇಕು ? ಎಂದು ಹಂಸವನ್ನು ಕುರಿತು ಹೇಳುವಂತೆ ತೋರುವ ಈ ಪದ್ಯದಲ್ಲಿ, ಮೊದಲು ಅದೃಷ್ಟವಂತನಾಗಿ ರಮಣೀಯವಾದ ಪ್ರದೇಶದಲ್ಲಿ ವಾಸಿಸುತ್ತಿದ್ದ ಓರ್ವನು ಈಗ ದುರದೃಷ್ಟವಶದಿಂದ ನೀಚಜನರ ಸಹವಾಸದಲ್ಲಿ ಇರಬೇಕಾಗಿ ಬಂದ ಪ್ರಸಂಗವನ್ನು ವರ್ಣಿಸಲಾಗಿದೆ.

ಈ ಅನ್ಯೋಕ್ತಿಯನ್ನು ಒಬ್ಬ ಕವಿಗೆ ಅನ್ವಯಿಸಿ ಹೀಗೆ ಹೇಳಬಹುದು. ಮೊದಲು ಸಹೃದಯನಾದ ರಾಜನ ಆಶ್ರಯದಲ್ಲಿ ಕಾಲವನ್ನು ಕಳೆದವನು ಈಗ ಅರಸಿಕರಾದ ಮತ್ತು ವಾಚಾಲರಾದ ಕೆಲ ಕ್ಷುದ್ರಬುದ್ಧಿಯವರೊಡನೆ ಕಳೆಯಬೇಕಾಗಿದೆ.

**3.** अयि दलदरविन्द तव स्यन्दमानं मरन्दं लिहन्तः भृङ्गाः किमपि मञ्जु गुञ्जन्तु, अयं गन्धवाहः दिशि दिशि तावकीनं परिमलं विवृण्वन् अन्यः बान्धवः।

मरन्द ಹೂವಿನ ರಸ, दलत् अरविन्दम् तस्य संबुद्धिः ಅರಳುತ್ತಿರುವ ಕಮಲವೇ, स्यन्दमानं ಸುರಿಯುತ್ತಿರುವ, मञ्जु ಮಧುರವಾಗಿ. ಇದು ಅರವಿಂದಾ

ನ್ಯೋಕ್ತಿ. ಇಲ್ಲಿ ಅರಳಿದ ಕಮಲವನ್ನುದ್ದೇಶಿಸಿ ಭ್ರಮರಗಳು ನಿನ್ನಲ್ಲಿಯ ಪುಷ್ಪ ರಸವನ್ನು ಕುಡಿದು, ಮಧುರವಾದ ಗುಂಜಾರವದಿಂದ ನಿನ್ನ ಕೀರ್ತಿಯನ್ನು ಹರಡುತ್ತಿದ್ದರೂ, ಮಧುರಸವೇ ಮೊದಲಾದ ಯಾವ ಅಪೇಕ್ಷೆಯೂ ಇಲ್ಲದ ನಿನ್ನ ಪರಿಮಳವನ್ನು ಎಲ್ಲ ಕಡೆಗೂ ಹರಡುತ್ತಿರುವ ಗಾಳಿಯೇ ನಿನಗೆ ನಿಜವಾಗಿಯೂ ಮಿತ್ರನು ಎಂದು ಅರಳುವ ಕಮಲವನ್ನುದ್ದೇಶಿಸಿ ಹೇಳಿದಂತೆ ತೋರಿದರೂ ಇಲ್ಲಿ ಉದಯೋನ್ಮುಖನಾದ ಓರ್ವನನ್ನು ಕುರಿತು ನಿನ್ನಿಂದ ಆಶ್ರಯವನ್ನು ಪಡೆದು ನಿನ್ನ ಗುಣಗಾನ ಮಾಡುವ ಮಿತ್ರರಿಗಿಂತ, ನಿರಪೇಕ್ಷನಾಗಿ ಎಲ್ಲ ಕಡೆಯಲ್ಲೂ ಗುಣಗಾನ ಮಾಡುವ ನಿನ್ನ ಮಿತ್ರನೇ ನಿಜವಾದ ಮಿತ್ರನು ಎಂದು ವರ್ಣಿಸಿದೆ.

**4.** हे कोकिल, वनान्तरे निवसन् तावत् विरसान् दिवसान् यापय यावत् मिलदलिमालः कोऽपि रसालः समुल्लसति ।

यापय—या प्रापणे ಧಾತುವಿನ ಲೋಟ್ ದ್ವಿತೀಯ ಪುರುಷ ಏಕವಚನ ಣಿಜಂತ (ಪ್ರೇರಣಾರ್ಥಕ).

मिलन्ती अलीनां माला यस्मिन् सः ಸಾಲುಸಾಲಾದ ದುಂಬಿಗಳಿಂದ ತುಂಬಿದ, रसालः ಮಾವಿನ ಮರ.

ಈ ಶ್ಲೋಕದಲ್ಲಿ ಮಾವಿನ ಮರವು ಚಿಗುರುವವರೆಗೆ ಹೇಗಾದರೂ ದಿವಸಗಳನ್ನು ಕಳೆ ಎಂದು ಕೋಗಿಲೆಗೆ ಹೇಳುವುದರ ಮುಖಾಂತರ ಒಬ್ಬ ವಿದ್ವಾಂಸನಿಗೆ, ನಿನ್ನ ವಿದ್ವತ್ತಿನ ಗುಣಗ್ರಹಣವನ್ನು ಮಾಡಬಲ್ಲ ಒಬ್ಬ ಆಶ್ರಯದಾತನು ದೊರೆಯುವವರೆಗೆ ಹೇಗಾದರೂ ಕಾಲವನ್ನು ಕಳೆ ಎಂದು ಹೇಳುವ ಅನ್ಯೋಕ್ತಿಯಿದೆ. ಇದು ಕೋಕಿಲಾನ್ಯೋಕ್ತಿ.

**5.** हे कूप (अहं) नितरां नीचोऽस्मि इति त्वं कदापि खेदं मा कृथाः यतः अत्यन्तसरसहृदयः परेषां गुणग्रहीता असि ।

मा+अकृथाः—कृ ಧಾತು ಲುಙ್ ಮಧ್ಯಮ ಪುರುಷ ಏಕವಚನ. 'मा' ಪ್ರಯೋಗವಿರುವುದರಿಂದ 'ಅ' ಕಾರವು ಬರದೆ 'मा कृथाः' ಎಂದು ರೂಪವಾಗಿದೆ. नीचः ಕೆಳಗಿರುವುದು, (ವ್ಯಕ್ತಿಗೆ ಅನ್ವಯಿಸಿದಾಗ) ಹೀನ, अत्यन्तसरसहृदयः ನೀರು ತುಂಬಿದ, (ವ್ಯಕ್ತಿಗೆ ಅನ್ವಯಿಸಿದಾಗ) ಸರಸ ಸ್ವಭಾವದ, गुणग्रहीता ಹಗ್ಗವನ್ನು ಒಳಗೆ ತೆಗೆದುಕೊಳ್ಳುವ, (ವ್ಯಕ್ತಿಗೆ ಅನ್ವಯಿಸಿದಾಗ) ಗುಣವನ್ನು ಗ್ರಹಿಸುವ.

ಇಲ್ಲಿ ಬಾವಿಯು ಕೆಳಗೆ ಇದ್ದರೂ ಸರಸಹೃದಯ ಉಳ್ಳದ್ದಾಗಿದೆ. ಅಂದರೆ, ನೀರು ತುಂಬಿದ್ದಾಗಿದೆ ಮತ್ತು ಗುಣ (ಹಗ್ಗ) ಗ್ರಹಣ ಮಾಡುತ್ತದೆ ಎಂದು

ಹೇಳುವುದರ ಮೂಲಕ ಶ್ಲೇಷದಿಂದ ಹೀನದೆಶೆಯಲ್ಲಿದ್ದ ಒಬ್ಬ ವ್ಯಕ್ತಿಯನ್ನು ಕುರಿತು, ನೀನು ಸರಸಹೃದಯನು, ಗುಣಗ್ರಹಣ ಸ್ವಭಾವದವನು ; ಆದ್ದರಿಂದ ನಿನ್ನ ಹೀನದಶೆಗಾಗಿ ವ್ಯಥೆಪಡಬೇಡ ಎಂದು ಹೇಳಿದೆ. ಇದು ಕೂಪಾನ್ಯೋಕ್ತಿ.

**6.** अयि मलयज अयं ते महिमा कस्य गिरां विषयः। यत् गरलं उद्गिरतः फणिनः परिमलोद्गारैः पुष्णासि ।

मलये जायते इति मलयजः, तस्य संबुद्धिः ಚಂದನ ವೃಕ್ಷ, गरलं ವಿಷವನ್ನು, उद्गिरतः ಕಾರುವ, फणिनः ಹಾವುಗಳನ್ನು, पुष्णासि ಪೋಷಿಸುವೆ, परिमलोद्गारैः ಸುಗಂಧವನ್ನು ಹೊರಸೂಸುವುದರಿಂದ. ಇಲ್ಲಿ ವಿಷವನ್ನು ಕಾರುವ ಹಾವುಗಳನ್ನು ಪೋಷಿಸುವೆ ಎಂದು ಚಂದನವೃಕ್ಷದ ನಿಂದಾಸ್ತುತಿಯ ಮುಖಾಂತರ ದುರ್ಜನರಿಗೂ ಉಪಕಾರವನ್ನು ಮಾಡುವ ಒಬ್ಬ ವ್ಯಕ್ತಿಯ ನಿಂದಾಸ್ತುತಿಯನ್ನು ಮಾಡಲಾಗಿದೆ. ಇದು ಚಂದನವೃಕ್ಷಾನ್ಯೋಕ್ತಿ.

**7.** हे हंस, नीरक्षीरविवेके त्वमेव आलस्यं तनुषे चेत् अधुना विश्वस्मिन् कः अन्यः कुलव्रतं पालयिष्यति ।

ಇಲ್ಲಿ, ಹಂಸವೇ! ನೀರು ಮತ್ತು ಹಾಲನ್ನು ವಿಂಗಡಿಸುವ ಕಾರ್ಯವನ್ನು ನೀನೇ ಉದಾಸೀನ ಮಾಡಿದರೆ, ಇನ್ನುಳಿದವರು ತಮ್ಮ ತಮ್ಮ ಕರ್ತವ್ಯಗಳನ್ನು ನಿರ್ವಹಿಸುವುದು ಹೇಗೆ ಎಂದು ಹಂಸವನ್ನು ಆಕ್ಷೇಪಿಸುವುದರ ಮುಖಾಂತರ ನ್ಯಾಯಾನ್ಯಾಯಗಳನ್ನು ತಿಳಿಯಬಲ್ಲವರೇ ನಿಷ್ಪಕ್ಷಪಾತರಾಗಿ ಅದನ್ನು ತಿಳಿಸ ದಿದ್ದರೆ ಇನ್ನುಳಿದವರು ತಮ್ಮ ತಮ್ಮ ಕರ್ತವ್ಯಗಳನ್ನು ಎಂತು ಮಾಡುವುದು ಎಂಬ ಅನ್ಯೋಕ್ತಿ ಇದೆ. ಇದು ಹಂಸಾನ್ಯೋಕ್ತಿ.

**8.** हे सरः, त्वयि संकोचम् अञ्चति (सति) पतङ्गाः परितः अम्बरपथं आपेदिरे। भृङ्गाः रसालमुकुलानि समाश्रयन्ति। हन्त! दीनदीनः मीनः कतमां गतिम् अभ्युपैतु ।

पतङ्गाः ಪಕ್ಷಿಗಳು, परितः ಸುತ್ತಲೂ, अम्बरस्य पन्थाः तं आपेदिरे– आ+पद् (पद+गतौ) ಧಾತುವಿನ ಲಿಟ್ ತೃತೀಯ ಬಹುವಚನ. मुकुल ಮೊಗ್ಗು, संकोचमञ्चति ನೀರಿಲ್ಲದಂತಾದಾಗ, अञ्चति–अञ्च् ಧಾತುವಿನ ವರ್ತಮಾನ ಕರ್ತರಿ ಕೃದಂತ, ಸಪ್ತಮೀ ಏಕವಚನ. अभ्युपैतु–अभि+उप+इ (इण् गतौ) ಧಾತುವಿನ ಲೋಟ್ ತೃತೀಯ ಪುರುಷ ಏಕವಚನ.

ಇಲ್ಲಿ, ಸರೋವರದ ನೀರು ಇಂಗಿದಾಗ ಪಕ್ಷಿಗಳು, ಭ್ರಮರಗಳು ಬೇರೆ ಕಡೆಗೆ ಆಶ್ರಯವನ್ನು ಪಡೆಯುವುವು. ಆದರೆ ಮೀನಿನ ಗತಿಯೇನು ? ಎಂಬ ನಿರೂಪಣೆಯು

ಮುಖಾಂತರ ಒಬ್ಬ ಸಿರಿವಂತನ ಐಶ್ವರ್ಯವು ಕಡಿಮೆಯಾದಾಗ, ಇನ್ನಿತರ ಆಶ್ರಿತರು ಬೇರೆ ಕಡೆಗೆ ಹೋದರೂ ಕೇವಲ ಅವನನ್ನೇ ಅವಲಂಬಿಸಿದ ಅವನ ಪರಿವಾರದವರ ಗತಿಯೇನು? ಎಂಬ ಅನ್ಯೋಕ್ತಿಯಿದೆ. ಇದು ಸರೋವರಾನ್ಯೋಕ್ತಿ.

**9.** हे मालति, मिलिन्दे मञ्जु गुञ्जति (सति) मौनं मा उपयासीः। वदान्यगुरवः सुरतरवः एनं शिरसा सादरं वहन्ति।

मिलिन्दः ಭ್ರಮರ, गुञ्जति, गुञ्ज् ಧಾತುವಿನ ವರ್ತಮಾನ ಕರ್ತರಿ ಕೃದಂತ, ಸಪ್ತಮೀ ವಿಭಕ್ತಿ ಏಕವಚನ. मा उपयासीः, उप+या–या प्रापणे ಧಾತುವಿನ ಲುಙ್ ದ್ವಿತೀಯ ಪುರುಷ ಏಕವಚನ. वदान्यगुरवः ಶ್ರೇಷ್ಠದಾನಿಗಳು, सुरतरु ಕಲ್ಪವೃಕ್ಷ

ಇಲ್ಲಿ, ಹತ್ತಿರ ಬಂದ ಭ್ರಮರವನ್ನು ಸ್ವಾಗತಿಸದೇ ಇರಬೇಡ. ಏಕೆಂದರೆ, ಕಲ್ಪವೃಕ್ಷಗಳು ಭ್ರಮರವನ್ನು ತಲೆಯಮೇಲಿಟ್ಟುಕೊಳ್ಳಲು ಸಿದ್ಧವಾಗಿರುವುವು ಎಂದು ಮಲ್ಲಿಗೆಯ ಬಳ್ಳಿಗೆ ಹೇಳುವುದರ ಮೂಲಕ, ಒಬ್ಬ ಮಾನಿನಿಗೆ, ಹತ್ತಿರ ಬಂದ ಪ್ರಿಯತಮನನ್ನು ಸ್ವಾಗತಿಸದೆ ಸುಮ್ಮನಿರಬೇಡ ಅವನನ್ನು ತಲೆಯ ಮೇಲಿಟ್ಟುಕೊಳ್ಳಲು ಅಪ್ಸರೆಯರೂ ಸಿದ್ಧರಾಗಿರುವರು, ಎಂಬ ಅನ್ಯೋಕ್ತಿಯಿದೆ. ಇದು ಭ್ರಮರಾನ್ಯೋಕ್ತಿ.

**10.** हे कोकिल, अस्मिन् गहने एकः त्वं कदाचिदपि कलं न कुर्याः। अमी निर्दयाः काकाः त्वां साजात्यशङ्कया न निघ्नन्ति।

कलः ಕೋಗಿಲೆಯ ಮಧುರ ಧ್ವನಿ, कुर्याः–कृ ಧಾತುವಿನ ವಿಧಿಲಿಙ್ ತೃತೀಯ ಏಕವಚನ. ಇಲ್ಲಿ ಕೋಗಿಲೆಗೆ, ನೀನು ಮಧುರ ಧ್ವನಿಯನ್ನು ಮಾಡಬೇಡ. ಅಂದರೆ ಕಾಗೆಗಳು ನೀನೂ ತಮ್ಮ ಗುಂಪಿಗೆ ಸೇರಿದವನು ಎಂಬ ಭಾವನೆಯಿಂದ ನಿನ್ನನ್ನು ಕೊಲ್ಲುವುದಿಲ್ಲ ಎಂದು ಹೇಳುವುದರ ಮೂಲಕ, ದುರ್ಜನರ ಸಮುದಾಯದಲ್ಲಿದ್ದ ಒಬ್ಬ ಸಜ್ಜನನಿಗೆ, ನೀನು ನಿನ್ನ ಸದ್ಗುಣಗಳನ್ನು ವ್ಯಕ್ತಪಡಿಸದೆ ಸುಮ್ಮನಿರುವುದೇ ಒಳ್ಳೆಯದು. ಇಲ್ಲವಾದರೆ ಈ ದುರ್ಜನರು ನಿನ್ನನ್ನು ಪೀಡಿಸುವರು ಎಂಬ ಅನ್ಯೋಕ್ತಿಯಿದೆ. ಇದು ಕೋಕಿಲ ಅನ್ಯೋಕ್ತಿ.

**11.** अपेक्षा न, न च दाक्षिण्यम्, न प्रीतिः, न च संगतिः, तथापि उन्नतः घनः लोकानां तापं हरते।

ಇಲ್ಲಿ ಮೇಘವು ಯಾವ ಪ್ರತ್ಯುಪಕಾರದ ಅಪೇಕ್ಷೆಯೂ ಇಲ್ಲದೆ, ಯಾವ ದಾಕ್ಷಿಣ್ಯಕ್ಕೂ ಒಳಗಾಗದೆ ಅಥವಾ ಯಾರ ಸ್ನೇಹ ಹಾಗೂ ಸಹವಾಸದ

ಕಾರಣವಿಲ್ಲದೆ, ಜನರ ತಾಪವನ್ನು ಪರಿಹರಿಸುತ್ತದೆ ಎಂಬ ಮೋಡದ ಸ್ತುತಿಯ ಮುಖಾಂತರ ಉದಾರಚರಿತನಾದ ಪುರುಷನು ಪ್ರತ್ಯುಪಕಾರಾಪೇಕ್ಷೆ ಇತ್ಯಾದಿ ಯಾವುದೇ ನಿಮಿತ್ತವಿಲ್ಲದೆ ಜನರಿಗೆ ಸಹಾಯ ಮಾಡುತ್ತಾನೆ ಎಂಬ ಅನ್ಯೋಕ್ತಿ ಇದೆ. ಇದು ಮೇಘಾನ್ಯೋಕ್ತಿ.

**12.** हे क्षीरार्णव, तव तीरे ग्रावगणैः साकं अर्कबिम्बोपमाः मणयः लुठन्ति। नीरे नीरचरैः समं भगवान् नारायणः निद्राति। एवं तव अविवेकम् अपि च उन्नतेः परां प्रौढिं च वीक्ष्य अहं त्वां किं निन्दानि अथवा स्तवानि (इति) कथय।

ग्रावा ಕಲ್ಲು, अर्कस्य बिम्बम् उपमा येषां ते (बहुव्रीहिः) ಸೂರ್ಯ ಬಿಂಬವನ್ನು ಹೋಲುವ, नीरचराः ಜಲಚರ ಪ್ರಾಣಿಗಳು, निन्दानि—निन्द् ಧಾತುವಿನ ಲೋಟ್ ಉತ್ತಮ ಪುರುಷ ಏಕವಚನ. स्तवानि—स्तु ಧಾತುವಿನ ಲೋಟ್ ಉತ್ತಮ ಪುರುಷ ಏಕವಚನ.

ಈ ಶ್ಲೋಕದಲ್ಲಿ ಸಮುದ್ರ ತೀರದಲ್ಲಿ ಕಲ್ಲು ತುಂಡುಗಳು ಮತ್ತು ಥಳಥಳಿಸುವ ರತ್ನಗಳು, ಸಮುದ್ರದ ನೀರಲ್ಲಿ ಮೀನು ಮೊಸಳೆ ಇತ್ಯಾದಿ ಜಲಚರಗಳು ಮತ್ತು ನಾರಾಯಣನೂ ಇರುವುದರಿಂದ, ಸಮುದ್ರರಾಜನ ಕ್ಷುದ್ರ ವಸ್ತುಗಳಿಗೆ ಆಶ್ರಯ ಕೊಡುವುದರಿಂದ ಇರುವ ಅವಿವೇಕವನ್ನೂ ಶ್ರೇಷ್ಠ ವಸ್ತುಗಳಿಗೆ ಆಶ್ರಯ ಕೊಡುವುದರಿಂದ ಇರುವ ಪ್ರೌಢಿಮೆಯನ್ನೂ ಕಂಡು ಅವನನ್ನು ತೆಗಳಬೇಕೋ ಹೊಗಳಬೇಕೋ ಎಂಬುದು ತಿಳಿಯುವುದಿಲ್ಲ ಎನ್ನುವುದರ ಮೂಲಕ, ಒಬ್ಬ ಸಜ್ಜನನು ಕ್ಷುದ್ರರಿಗೂ ಉತ್ತಮರಿಗೂ ಸಮನಾಗಿಯೇ ಆಶ್ರಯವನ್ನು ಕೊಡುವುದರಿಂದ, ಅವನನ್ನು ಹೊಗಳಬೇಕೋ ತೆಗಳಬೇಕೋ ತಿಳಿಯದಂತಾಗಿದೆ ಎಂದು ಅನ್ಯೋಕ್ತಿಯಿಂದ ಹೇಳಲಾಗಿದೆ. ಇದು ಸಮುದ್ರಾನ್ಯೋಕ್ತಿ.

**13.** हे अर्णव, एतैः रत्नैः किम्, ते अभ्रायितेन वपुषा किम्, यत् तावकं सलिलं अपि तृषितानां वदनं न प्रयाति।

अभ्रवत् आचरितं येन ಮೇಘದಂತೆ ಸ್ನಿಗ್ಧವಾದ, वपुः ಶರೀರ, तव इदं—तावकं ನಿನ್ನ, तृषित ಬಾಯಾರಿದವ. ಇಲ್ಲಿ, ಸಮುದ್ರರಾಜನೇ ! ನಿನ್ನ ರತ್ನಗಳಿಂದ ಅಥವಾ ಮೇಘಸದೃಶವಾದ ನಿನ್ನ ಶರೀರದಿಂದ ಏನು ಪ್ರಯೋಜನ ? ನಿನ್ನ ನೀರು ನೀರಡಿಸಿದವರ ಬಾಯನ್ನು ತಲಪುವುದಿಲ್ಲವಲ್ಲಾ ಎಂದು ಹೇಳುವುದರ ಮೂಲಕ ಒಬ್ಬ ಸುಂದರ ಮತ್ತು ಧನಿಕನಾದ ಪುರುಷನನ್ನು ಕುರಿತು, ನೀನು ಪರೋಪಕಾರವನ್ನು ಎಳ್ಳಷ್ಟೂ ಮಾಡುವುದಿಲ್ಲವಲ್ಲಾ ಎಂಬ ಅನ್ಯೋಕ್ತಿಯಿದೆ. ಇದು ಸಮುದ್ರಾನ್ಯೋಕ್ತಿ.

**14.** हे गजराजपोत गुरुगर्वगुम्फितः गिरिगह्वरेषु कदापि न सञ्चरेः। यदि स्तनंधयः हरिशिशुः बुध्यते (तर्हि) मही करेणुपरिशेषिता भविता।

गह्वरः ಗವಿ, गुरुणा गर्वेण गुम्फितः ತುಂಬ ಗರ್ವಿಷ್ಠನಾಗಿ, गजराजपोत! ಆನೆಯ ಮರಿಯೇ! स्तनन्धयः ಮೊಲೆಹಾಲನ್ನು ಕುಡಿಯುವ, हरिशिशुः ಸಿಂಹದ ಮರಿ, करेणुः ಹೆಣ್ಣಾನೆ, मही ಭೂಮಿ.

ಇಲ್ಲಿ, ಗರ್ವಿಷ್ಠನಾಗಿ ಸಂಚರಿಸಬೇಡ, ಸಿಂಹದ ಮರಿಯು ನಿನ್ನನ್ನು ಕೊಂದೀತು ಎಂದು ಆನೆಯ ಮರಿಗೆ ಉಪದೇಶಿಸುವಂತೆ ಕಂಡರೂ ಪ್ರಬಲನಾದ ಶತ್ರುವಿರುವವರು ಯಾವಾಗಲೂ ಎಚ್ಚರಿಕೆಯಿಂದಿರಬೇಕು ಎಂಬ ಅನ್ಯೋಕ್ತಿಯಿದೆ. ಇದು ಗಜಪೋತಾನ್ಯೋಕ್ತಿ.

**15.** हरिशिशुः निशार्धजातः अपि मनाक् गर्जितम् आकर्ण्य द्राक् उत्पतितुम् अङ्गानि आकुञ्चय मातुः अंके निभृतं लीयते।

मनाक् (ಅವ್ಯಯ) ಸ್ವಲ್ಪ, गर्जितम् ಮೇಘದ ಧ್ವನಿ, ಗುಡುಗು, निशार्धजातः ಹುಟ್ಟಿ ಅರ್ಧರಾತ್ರಿಯು ಮಾತ್ರ ಕಳೆದ, द्राक् (ಅವ್ಯಯ) ಕೂಡಲೇ, निभृतं लीयते ನಿಶ್ಚಲವಾಗಿ ನಿಲ್ಲುತ್ತದೆ. ಇಲ್ಲಿ ಇದೀಗ ಹುಟ್ಟಿದ ಸಿಂಹಶಿಶುವೂ, ಆನೆಯ ಗರ್ಜನೆಯನ್ನು ಹೋಲುವ ಮೇಘದ ಗರ್ಜನೆಯನ್ನು ಕೇಳಿದ ತಕ್ಷಣ ಅದರ ಮೇಲೆ ಹಾರಲು ಸಿದ್ಧವಾಗಿ ನಿಲ್ಲುತ್ತದೆ ಎಂದು ವರ್ಣಿಸುವುದರ ಮೂಲಕ ಪರಾಕ್ರಮಿಯಾದವನು ಚಿಕ್ಕವನಾದರೂ ಶತ್ರುಗಳನ್ನು ಎದುರಿಸಲು ಸಿದ್ಧನಾಗುವನು ಎಂಬ ಅನ್ಯೋಕ್ತಿಯಿದೆ. ಇದು ಸಿಂಹಾನ್ಯೋಕ್ತಿ.

---

# १५. सुभाषितानि

ಸಂಸ್ಕೃತದಲ್ಲಿ ಸುಭಾಷಿತಗಳು ವಿಶೇಷವಾದ ಸ್ಥಾನವನ್ನು ಪಡೆದಿವೆ. ಜೀವನದಲ್ಲಿಯ ಅನುಭವಗಳನ್ನು ನಾಣ್ಣುಡಿಗಳಂತೆ ಸಂಗ್ರಹ ರೂಪದಲ್ಲಿ ಹೇಳಿದ ಶ್ಲೋಕಗಳೇ ಸುಭಾಷಿತಗಳು. ಅನೇಕ ಕವಿಗಳು ಬಿಡಿಯಾಗಿ ರಚಿಸಿದ ಸುಭಾಷಿತಗಳೂ ಮತ್ತು ಮಹಾಕವಿಗಳ ಕಾವ್ಯಗಳಲ್ಲಿ ನಡುನಡುವೆ ಬಂದ ನಾಣ್ಣುಡಿಯಂಥ ಸುಭಾಷಿತಗಳೂ ಸಂಸ್ಕೃತದಲ್ಲಿ ವಿಪುಲವಾಗಿವೆ. ರಾಮಾಯಣ, ಮಹಾಭಾರತಗಳಲ್ಲಿಯೂ ಶೌನಕ, ಬೃಹಸ್ಪತಿ, ಶುಕ್ರ, ಕಾಮಂದಕ ಇತ್ಯಾದಿಗಳ ನೀತಿ ಗ್ರಂಥಗಳಲ್ಲಿಯೂ ಪಂಚತಂತ್ರ, ಹಿತೋಪದೇಶ ಇತ್ಯಾದಿಗಳಲ್ಲಿಯೂ ಅನೇಕ ಸುಭಾಷಿತಗಳು ಬಂದಿವೆ. ಇಂಥ ಸುಭಾಷಿತಗಳನ್ನು ಸಂಗ್ರಹಿಸಿರುವ ಸದುಕ್ತಿಕರ್ಣಾಮೃತ, ಸುಭಾಷಿತಾವಲೀ, ಸೂಕ್ತಿಮುಕ್ತಾವಲೀ ಇತ್ಯಾದಿ ಸಂಕಲನಗಳೂ ಇವೆ. ಮಾನವನ ವಿವೇಕದ ಬೆಳವಣಿಗೆಗೆ ಸಂಸ್ಕೃತ ಸುಭಾಷಿತಗಳು ತುಂಬ ಸಹಕಾರಿಯಾಗಿವೆ. ಇಲ್ಲಿ ಶೌನಕನ ನೀತಿಸಾರ ಮತ್ತು ಬೃಹಸ್ಪತಿಯ ನೀತಿಸಾರಗಳಿಂದ ಕೆಲವು ಸುಭಾಷಿತಗಳನ್ನು ಆಯ್ದುಕೊಳ್ಳಲಾಗಿದೆ.

**1.** ಜೀವನದಲ್ಲಿ ಮಾನವನಿಗೆ ಮನೋವೇದನೆಯನ್ನುಂಟುಮಾಡುವ ಐದು ಅಂಶಗಳನ್ನು ಇಲ್ಲಿ ನಿರೂಪಿಸಲಾಗಿದೆ.

**2.** ಈ ಶ್ಲೋಕದಲ್ಲಿ ಜೀವನವನ್ನು ಹಿತಕರವಾಗಿ ಮಾಡುವ ಐದು ಅಂಶಗಳನ್ನು ಹೇಳಲಾಗಿದೆ.

**3.** वारितरङ्गगर्भचपलं वारिणः तरङ्गः तस्य गर्भ इव चपलं ನೀರಿನ ಸುಳಿಯಂತೆ ಚಂಚಲವಾದ.

ಆಯುಷ್ಯದಲ್ಲಿ ಸಾರ್ಥಕ ಜೀವನವನ್ನು ನಡೆಸಲು ದೊರೆಯುವ ಸಮಯವು ಅತ್ಯಲ್ಪವಾದ್ದರಿಂದ, ಅಹಂಕಾರವು ಯೋಗ್ಯವಲ್ಲ ಎಂದು ಇಲ್ಲಿ ಹೇಳಲಾಗಿದೆ.

**4.** श्रुतिसमये बहुभिः वितर्कितस्य ಶ್ರುತಿಸ್ಮೃತ್ಯಾದಿಗಳಲ್ಲಿ ಆಳವಾಗಿ ಆಲೋಚಿಸಿ ನಿರ್ಣಯಿಸಲ್ಪಟ್ಟ, अहितहितविचारशून्यबुद्धेः ಹಿತಾಹಿತಗಳನ್ನು ತಿಳಿಯದೇ ಇರುವ.

**5.** विज्ञानविक्रमयशोभिः ಜ್ಞಾನ ಪರಾಕ್ರಮ ಮತ್ತು ಕೀರ್ತಿಗಳಿಂದ, प्रथितं ಕೀರ್ತಿಸಂಪನ್ನವಾಗಿ.

6. भुङ्क्ते—भुज् ಧಾತುವಿನ ಲಟ್ ತೃತೀಯ ಪುರುಷ ಏಕವಚನ.

7. बहुशठाग्रहसंकुलेन ಶಾಠ್ಯ ಮತ್ತು ಆಗ್ರಹಗಳಿಂದ ಕೂಡಿದ.

8. विहगाः ಪಕ್ಷಿಗಳು, पर्युषितम् ಬಾಡಿದ.

9. वागुर ಬಲೆ.

10. दारेषु ಹೆಂಡತಿಯಲ್ಲಿ. दाराः ಶಬ್ದವು ಪುಲ್ಲಿಂಗ ಮತ್ತು ನಿತ್ಯ-ಬಹುವಚನ.

---

# ಬೆಂಗಳೂರು ವಿಶ್ವವಿದ್ಯಾಲಯದ ಪ್ರಕಟಣೆಗಳು

## ಪಠ್ಯಪುಸ್ತಕಗಳು

| | | |
|---|---|---|
| 1 | ಪ್ರೀ ಯೂನಿವರ್ಸಿಟಿ ಗಣಿತಶಾಸ್ತ್ರ ಭಾಗ 1 | ಎಫ್. ಜೆ. ನೊರೊನ್ಹಾ ಮತ್ತು ಇತರರು |
| 2 | ಕಾವ್ಯ ಲಹರಿ | ಸಂ: ಆರ್. ಎಸ್. ಮುಗಳಿ ಮತ್ತು ಇತರರು |
| 3 | ಮನಃಶಾಸ್ತ್ರ ಪ್ರವೇಶಿಕೆ | ಎಸ್. ಕೆ. ರಾಮಚಂದ್ರರಾವ್ |
| 4 | ಬೀಜರೇಖಾಗಣಿತ ಮತ್ತು ತ್ರಿಕೋಣಮಿತಿ | ಜಿ. ಟಿ. ನಾರಾಯಣರಾವ್ |
| 5 | ರಾಜ್ಯಶಾಸ್ತ್ರ ಪ್ರವೇಶಿಕೆ | ಹೆಚ್. ಆರ್. ದಾಸೇಗೌಡ ಮತ್ತು ಎಂ. ಎ. ಸಿಂಗಮ್ಮಾಳ್ |
| 6 | ಸಂಗೀತಶಾಸ್ತ್ರ ಪ್ರಕಾಶಿಕೆ | ಟಿ. ಆರ್. ನಾಗರತ್ನ |
| 7 | ಸಂಗೀತಶಾಸ್ತ್ರ ಬೋಧಿನಿ | ಜಿ. ಚನ್ನಮ್ಮ |
| 8 | ಅರ್ಥಶಾಸ್ತ್ರ | ಹೆಚ್. ಆರ್. ಸಾಲುಂಕೆ |
| 9 | ಪ್ರೀ ಯೂನಿವರ್ಸಿಟಿ ಭೌತವಿಜ್ಞಾನ | ಬಿ. ವಿ. ನಾರಾಯಣರಾವ್ |
| 10 | ಸಾಮಾನ್ಯ ಭೌತಶಾಸ್ತ್ರ ಮತ್ತು ಜಡವಸ್ತುವಿನ ಗುಣಗಳು | ಕೆ. ಶೇಷಾದ್ರಿ ಅಯ್ಯಂಗಾರ್ |
| 11 | ವಾಣಿಜ್ಯಶಾಸ್ತ್ರ | ಟಿ. ಹೆಚ್. ನಾರಾಯಣರಾವ್ |
| 12 | ಭೂಗೋಳಶಾಸ್ತ್ರ | ಎ. ಕುಮಾರಸ್ವಾಮಿ |
| 13 | ಪ್ರೀ ಯೂನಿವರ್ಸಿಟಿ ಗಣಿತಶಾಸ್ತ್ರ ಭಾಗ 2 | ಎಫ್. ಜೆ. ನೊರೊನ್ಹಾ ಮತ್ತು ಇತರರು |
| 14 | ಆರ್ಥಿಕ ಅಭಿವೃದ್ಧಿ | ಟಿ. ಎಂ. ವಿಜಯಪ್ಪ ಮತ್ತು ಕೃಷ್ಣನಾಯಕ್ |
| 15 | ನೀತಿಶಾಸ್ತ್ರ | ಎಸ್. ರಂಗಾಚಾರ್ |
| 16 | ಗಣಿತತರ್ಕ ಪ್ರವೇಶಿಕೆ | ಎಫ್. ಜೆ. ನೊರೊನ್ಹಾ ಮತ್ತು ಇತರರು |
| 17 | ಧ್ವನಿ ಮತ್ತು ಪ್ರಾಯೋಗಿಕ ಭೌತಶಾಸ್ತ್ರ | ಕೆ. ಶೇಷಾದ್ರಿ ಅಯ್ಯಂಗಾರ್ |
| 18 | ದೃಢ ಚಲನೆ | ಜಿ. ಟಿ. ನಾರಾಯಣರಾವ್ |
| 19 | General Science Part I | M. Shadaksharaswamy *et. al.* |
| 20 | General Science Part II | M. Shadaksharaswamy *et. al.* |